RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| ಭಾಗ- I | ಬೆಂಗಳೂರು, ಗುರುವಾರ, ಮೇ ೨೧, ೨೦೧೫ (ವೈಶಾಖ ೩೧, ಶಕ ವರ್ಷ ೧೯೩೭) | ನಂ. ೬೦೧ |
|---|---|---|
| Part- I | Bengaluru, Thursday, May 21, 2015 (Vaishakha 31, Shaka Varsha 1937) | No. 601 |


### ಕರ್ನಾಟಕ ಸರ್ಕಾರದ ನಡವಳಿಗಳು

### ಕಂದಾಯ ಸಚಿವಾಲಯ

**ವಿಷಯ:** ಉತ್ತರ ಕನ್ನಡ ಜಿಲ್ಲೆಯ ಸೀಬರ್ಡ್ ನೌಕಾನೆಲೆ ಯೋಜನೆಯ ನಿರಾಶ್ರಿತರ ಪುನರ್ವಸತಿ ಸಲಹಾ ಸಮಿತಿಗೆ ಅಧಿಕಾರಿಗಳ ಮತ್ತು ಅಧಿಕಾರೇತರ ಸದಸ್ಯರುಗಳನ್ನು ನಾಮನಿರ್ದೇಶನ ಮಾಡುವ ಬಗ್ಗೆ.

**ಓದಲಾಗಿದೆ:** 1) ಜಿಲ್ಲಾಧಿಕಾರಿ, ಉತ್ತರ ಕನ್ನಡ ಜಿಲ್ಲೆ, ಕಾರವಾರ ಇವರ ಪತ್ರ ಸಂಖ್ಯೆ: ವಿಭೂಸ್ವಾ/ನೌನೆ/ವಿವ–/14–15 ದಿನಾಂಕ: 1.12.2014

2) ಜಿಲ್ಲಾಧಿಕಾರಿ, ಉತ್ತರ ಕನ್ನಡ ಜಿಲ್ಲೆ, ಕಾರವಾರ ಇವರ ಪತ್ರ ಸಂಖ್ಯೆ: ವಿಭೂಸ್ವಾ/ನೌನೆ/ವಿವ–239/14–15 ದಿನಾಂಕ: 30.01.2015

*****

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿ ಜಿಲ್ಲಾಧಿಕಾರಿ, ಉತ್ತರ ಕನ್ನಡ ಜಿಲ್ಲೆ, ಕಾರವಾರ ಇವರು "ಸೀಬರ್ಡ್ ರಾಜ್ಯಮಟ್ಟದ ಸಮನ್ವಯ ಸಮಿತಿ ರಚನೆಯಾದಾಗಿನಿಂದ ಈವರೆಗೆ ಅಧಿಕಾರೇತರ ಸದಸ್ಯರನ್ನು ನೇಮಕ ಮಾಡಿರುವುದಿಲ್ಲ ಎಂದು ತಿಳಿಸಿರುತ್ತಾರೆ.

ನೌಕಾನೆಲೆ ಯೋಜನೆಯಡಿ ನಿರಾಶ್ರಿತರಾದ ಕುಟುಂಬದವರಿಗೆ ಪುನರ್ವಸತಿ ಕಲ್ಪಿಸುವ ಕುರಿತು ತೆರೆಯಲಾದ ಪುನರ್ವಸತಿ ಕಛೇರಿಯನ್ನು ಸನ್–2005 ರಲ್ಲಿ ಮುಕ್ತಾಯ ಮಾಡಲಾಗಿದೆ. ಪ್ರಸ್ತುತ ಪುನರ್ವಸತಿ ಸಮಿತಿಯ ಕಾರ್ಯಗಳನ್ನು ವಿಶೇಷ ಭೂಸ್ವಾಧೀನಾಧಿಕಾರಿ, ನೌಕಾನೆಲೆ ಕಾರವಾರರವರು ನೋಡಿಕೊಳ್ಳುತ್ತಾರೆ. ಸದ್ಯ ಸೀಬರ್ಡ್ ರಾಜ್ಯಮಟ್ಟದ ಸಮನ್ವಯ ಸಮಿತಿ ಸಭೆಯಲ್ಲಿ ಎಲ್ಲಾ ನಿರ್ಣಯಗಳನ್ನು ಕೈಗೊಳ್ಳಲಾಗುತ್ತದೆ. ನೌಕಾನೆಲೆ ಯೋಜನೆಯಡಿ ನಿರಾಶ್ರಿತರಾದ ಕುಟುಂಬಗಳಿಗೆ ಪುನರ್ವಸತಿ ಕೇಂದ್ರಗಳನ್ನು ನಿರ್ಮಿಸಿ ಅವುಗಳಿಗೆ ಮೂಲಭೂತ ಸೌಕರ್ಯಗಳನ್ನು ಒದಗಿಸಿ ಮುಂದಿನ ನಿರ್ವಹಣೆಗಾಗಿ ಪಂಚಾಯತ್ ರಾಜ್ ಇಲಾಖೆಗೆ ಹಸ್ತಾಂತರಿಸಲಾಗಿರುವುದರಿಂದ ಈ ಹಂತದಲ್ಲಿ ಪುನರ್ವಸತಿ ಸಮಿತಿಯನ್ನು ರಚಿಸುವ ಅಗತ್ಯ ಇರುವುದಿಲ್ಲ ಎಂದು ಅಭಿಪ್ರಾಯ ಪಟ್ಟಿರುತ್ತಾರೆ. ಆದಾಗ್ಯೂ ಸರ್ಕಾರದಲ್ಲಿ ಈ ವಿಷಯವನ್ನು ಪರಿಶೀಲಿಸಿ, ಪುನರ್ವಸತಿ ಕಲ್ಪಿಸುವ ಅವಶ್ಯಕತೆ ಇರುವುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ. ಕಂಇ 110 ಆರ್ಇಹೆಚ್ 2014, ಬೆಂಗಳೂರು, ದಿನಾಂಕ : 15.04.2015**

ಉತ್ತರ ಕನ್ನಡ ಜಿಲ್ಲಾ ನೌಕಾನೆಲೆ ಯೋಜನೆಯಲ್ಲಿ ನಿರಾಶ್ರಿತರಾದ ಕುಟುಂಬಗಳಿಗೆ ಪುನರ್ವಸತಿ ಸೌಕರ್ಯಗಳನ್ನು ಒದಗಿಸುವ ದೃಷ್ಟಿಯಿಂದ ಹಾಗೂ ಪುನರ್ವಸತಿ ಕಾರ್ಯಗಳ ಬಗ್ಗೆ ಸರ್ಕಾರಕ್ಕೆ ಸಲಹೆಗಳನ್ನು ನೀಡಲು ಈ ಕೆಳಕಂಡ ಸರ್ಕಾರಿ ಮತ್ತು ಸರ್ಕಾರೇತರ ಸದಸ್ಯರುಗಳನ್ನು ಒಳಗೊಂಡ ಪುನರ್ವಸತಿ ಸಲಹಾ ಸಮಿತಿಯನ್ನು ರಚಿಸಿ ಆದೇಶಿಸಿದೆ:–

| | ಅಧಿಕಾರಿ/ಅಧಿಕಾರೇತರರು | ಪದನಾಮ |
|---|---|---|
| | ಜಿಲ್ಲಾ ಉಸ್ತುವಾರಿ ಸಚಿವರು | ಅಧ್ಯಕ್ಷರು |
| | ಪ್ರಾದೇಶಿಕ ಆಯುಕ್ತರು | ಸದಸ್ಯರು |
| | ಜಿಲ್ಲಾಧಿಕಾರಿ ಉತ್ತರ ಕನ್ನಡ ಜಿಲ್ಲೆ | ಸದಸ್ಯರು |
| | ಡೈರೆಕ್ಟರ್ ಜನರಲ್, ನೌಕಾನೆಲೆ, ಕಾರವಾರ | ಸದಸ್ಯರು |
| | ಮುಖ್ಯ ಕಾರ್ಯನಿರ್ವಾಹಣಾಧಿಕಾರಿ, ಜಿಲ್ಲಾ ಪಂಚಾಯತ್, ಕಾರವಾರ | ಸದಸ್ಯರು |

| | ಅಧಿಕಾರಿ/ಅಧಿಕಾರೇತರರು | ಪದನಾಮ |
|---|---|---|
| | ವಿಶೇಷ ಜಿಲ್ಲಾಧಿಕಾರಿ, ಭೂಸ್ವಾಧೀನ, ನೌಕಾನೆಲೆ, ಕೊಂಕಣ ರೈಲ್ವೆ, ಕಾರವಾರ | ಸದಸ್ಯ ಕಾರ್ಯದರ್ಶಿ |
| | ಕಾರ್ಯನಿರ್ವಾಹಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಕಾರವಾರ | ಸದಸ್ಯರು |
| | ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ | ಸದಸ್ಯರು |
| | ಉಪ ನಿರ್ದೇಶಕರು, ಮೀನುಗಾರಿಕೆ ಇಲಾಖೆ, ಕಾರವಾರ | ಸದಸ್ಯರು |
| | ಉಪ ನಿರ್ದೇಶಕರು, ತೋಟಗಾರಿಕೆ ಇಲಾಖೆ, ಕಾರವಾರ | ಸದಸ್ಯರು |
| | ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಣಾಧಿಕಾರಿ, ಕಾರವಾರ | ಸದಸ್ಯರು |
| | ಸಹಾಯಕ ನಿರ್ದೇಶಕರು, ಭೂ ದಾಖಲೆ ಇಲಾಖೆ, ಕಾರವಾರ | ಸದಸ್ಯರು |
| | ಸಹಾಯಕ ನಿರ್ದೇಶಕರು, ಭೂ ದಾಖಲೆ ಇಲಾಖೆ, ಕುಮಟಾ | ಸದಸ್ಯರು |
| | ಉಪ ವಿಭಾಗಾಧಿಕಾರಿ, ಕುಮಟಾ ಉಪ ವಿಭಾಗ, ಕುಮಟಾ | ಸದಸ್ಯರು |
| | ವಿಶೇಷ ಭೂಸ್ವಾಧೀನಾಧಿಕಾರಿ, ನೌಕಾನೆಲೆ–1, ಕಾರವಾರ | ಸದಸ್ಯರು |
| | ವಿಶೇಷ ಭೂಸ್ವಾಧೀನಾಧಿಕಾರಿ, ನೌಕಾನೆಲೆ–2, ಕಾರವಾರ | ಸದಸ್ಯರು |
| | ತಹಶೀಲ್ದಾರ್, ಕಾರವಾರ | ಸದಸ್ಯರು |
| | ತಹಶೀಲ್ದಾರ್, ಅಂಕೋಲಾ | ಸದಸ್ಯರು |

| | ಅಧಿಕಾರೇತರರು | ಪದನಾಮ |
|---|---|---|
| | ಶ್ರೀ ಅನಂತ ಕುಮಾರ್ ಹೆಗ್ಡೆ, ಮಾನ್ಯ ಲೋಕಸಭಾ ಸದಸ್ಯರು, ಶಿರಸಿ, ಉತ್ತರ ಕನ್ನಡ ಜಿಲ್ಲೆ. | ಸದಸ್ಯರು |
| | ಶ್ರೀ ಸತೀಶ್ ಕೃಷ್ಣಾ ಸೈಲ್, ಶಾಸಕರು, ವಿಧಾನ ಸಭಾ ಕಾರವಾರ ಕ್ಷೇತ್ರ, ಉತ್ತರ ಕನ್ನಡ ಜಿಲ್ಲೆ. | ಸದಸ್ಯರು |
| | ಶ್ರೀ ಪಿ.ಎಂ. ತಾಡೇಲ್, ಕಾರವಾರ, ಉತ್ತರ ಕನ್ನಡ ಜಿಲ್ಲೆ. | ಸದಸ್ಯರು |
| | ಶ್ರೀ. ನಾಗರಾಜು ನಾಯಕ, ವಕೀಲರು, ಕಾರವಾರ, ಉತ್ತರ ಕನ್ನಡ ಜಿಲ್ಲೆ. | ಸದಸ್ಯರು |
| | ಶ್ರೀ ರಮಾನಂದ ನಾಯಕ, ಹಿಚಕಡ, ಅಂಕೋಲ, ಉತ್ತರ ಕನ್ನಡ ಜಿಲ್ಲೆ. | ಸದಸ್ಯರು |
| | ಶ್ರೀ ಪಾಂಡುರಂಗ ಗೌಡ, ಅಂಕೋಲ, ಉತ್ತರ ಕನ್ನಡ ಜಿಲ್ಲೆ. | ಸದಸ್ಯರು |
| | ಶ್ರೀ ಪಕ್ರಾಶ ಬಿ ನಾಯ್ಕ, ಬಿನಗಾ ಮಹಾಲಸವಾಡ, ಕಾರವಾರ, ಉತ್ತರ ಕನ್ನಡ ಜಿಲ್ಲೆ. | ಸದಸ್ಯರು |
| | ಶ್ರೀ ದೇವಾನಂದ.ಎಲ್,ಚಂದೇಕರ್, ಮುಡ್ಗಾ ಅಂಚೆ, ಸೀಬರ್ಡ್ ನಿರಾಶ್ರಿತರ ಕಾಲೋನಿ, ಕಾರವಾರ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ. | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮಾರುತಿ ಪ್ರಸನ್ನ ಬಿ.ವಿ.**
ಸರ್ಕಾರದ ಅಧೀನ ಕಾರ್ಯದರ್ಶಿ–1
(ಪುನರ್ವಸತಿ ಮತ್ತು ಪುನರ್‌ನಿರ್ಮಾಣ)
ಕಂದಾಯ ಇಲಾಖೆ

**ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ೩) (೨೦೦ ಪ್ರತಿಗಳು)**

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ– I | ಬೆಂಗಳೂರು, ಸೋಮವಾರ, ಮೇ ೨೫, ೨೦೧೫ (ಜ್ಯೇಷ್ಠ ೦೪, ಶಕ ವರ್ಷ ೧೯೩೭) | ನಂ. ೬೧೦ |
|---|---|---|
| Part– I | Bengaluru, Monday, May 25, 2015 (Jyeishta 04, Shaka Varsha 1937) | No. 610 |

## ರಾಜ್ಯ ಚುನಾವಣಾ ಆಯೋಗ, ಕರ್ನಾಟಕ

## ರಾಜ್ಯ ಚುನಾವಣಾ ಆಯೋಗದ ನಡವಳಿಗಳು

**ವಿಷಯ** :– ರಾಜ್ಯದಲ್ಲಿ ಗ್ರಾಮಪಂಚಾಯತಿಗಳ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಹುದ್ದೆಗಳ ಮೀಸಲಾತಿ.

–:–:–:–

**ಪ್ರಸ್ತಾವನೆ :**

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ಪ್ರಕರಣ 44(2) ರ ಪ್ರಕಾರ ಜಿಲ್ಲಾಧಿಕಾರಿಗಳು ರಾಜ್ಯ ಚುನಾವಣಾ ಆಯೋಗದ ಸಾಮಾನ್ಯ ಹಾಗೂ ವಿಶೇಷ ಆದೇಶಕ್ಕೆ ಒಳಪಟ್ಟು ಗ್ರಾಮ ಪಂಚಾಯತಿಗಳಿಗೆ ಅಧ್ಯಕ್ಷ ಉಪಾಧ್ಯಕ್ಷ ಹುದ್ದೆಗಳ ಮೀಸಲಾತಿಯನ್ನು ನಿಗದಿಪಡಿಸಬೇಕಾಗಿರುತ್ತದೆ.

2) ಅಧ್ಯಕ್ಷ ಮತ್ತು ಉಪಾಧ್ಯಕ್ಷ ಹುದ್ದೆಗಳನ್ನು ಗ್ರಾಮ ಪಂಚಾಯತಿವಾರು ನಿಗದಿಪಡಿಸುವಾಗ ಪ್ರಕರಣ 44 ರ ವಿವರಣೆಯಲ್ಲಿರುವಂತೆ, ಸರದಿಯಂತೆ 1993 ನೇ ಸಾಲಿನಲ್ಲಿ ಚುನಾವಣೆ ನಡೆದ ನಂತರದ ಮೊದಲ ಮೀಸಲಾತಿ ಹಾಗೂ 2000ನೇ ಸಾಲಿನ ಚುನಾವಣೆಗಳ ನಂತರ ನಡೆದ ಎರಡು ಅವಧಿಗಳ ಮೀಸಲಾತಿ (2000 ಮತ್ತು 2002 ನೇ ಸಾಲು) ಹಾಗೂ 2005 ನೇ ಸಾಲಿನ ಚುನಾವಣೆ ನಂತರ ನಡೆದ ಎರಡು ಅವಧಿಗಳ ಮೀಸಲಾತಿ (2005 ಮತ್ತು 2007 ನೇ ಸಾಲು) ಹಾಗೂ 2010 ನೇ ಸಾಲಿನ ಚುನಾವಣೆ ನಂತರ ನಡೆದ ಎರಡು ಅವಧಿಗಳ (2010 ಮತ್ತು 2012 ನೇ ಸಾಲು) ನಿಗದಿಪಡಿಸಿದ ಮೀಸಲಾತಿಗಳನ್ನು ಪರಿಗಣಿಸಿ 2015 ನೇ ಸಾಲಿನ ಚುನಾವಣೆ ಮುಗಿದ ನಂತರ 5 ವರ್ಷದ ಅವಧಿಗೆ ಅಧ್ಯಕ್ಷ ಉಪಾಧ್ಯಕ್ಷ ಹುದ್ದೆಗಳನ್ನು ನಿಗದಿಪಡಿಸುವುದು.

3) ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993ರ ಪ್ರಕರಣ 44ರ ಉಪಪ್ರಕರಣ 2(ಎ)ರನ್ವಯ ರಾಜ್ಯ ಚುನಾವಣಾ ಆಯೋಗದ ಸಾಮಾನ್ಯ ಹಾಗೂ ವಿಶೇಷ ಆದೇಶಕ್ಕೊಳಪಟ್ಟು ಜಿಲ್ಲಾಧಿಕಾರಿಗಳು "ರಾಜ್ಯದಲ್ಲಿರುವ ಒಟ್ಟು ಜನಸಂಖ್ಯೆಯಲ್ಲಿ, ರಾಜ್ಯದಲ್ಲಿರುವ ಅನುಸೂಚಿತ ಜಾತಿಗಳ ಜನಸಂಖ್ಯೆಯು ಅಥವಾ ರಾಜ್ಯದಲ್ಲಿರುವ ಅನುಸೂಚಿತ ಪಂಗಡಗಳ ಜನಸಂಖ್ಯೆಯು ಯಾವ ಅನುಪಾತದಲ್ಲಿದೆಯೋ ಅಂತಹ ಹುದ್ದೆಗಳ ಸಂಖ್ಯೆಯು ರಾಜ್ಯದಲ್ಲಿರುವ ಅಧ್ಯಕ್ಷ ಮತ್ತ ಉಪಾಧ್ಯಕ್ಷ ಹುದ್ದೆಗಳ ಒಟ್ಟು ಸಂಖ್ಯೆಯಲ್ಲಿ ಸರಿಸುಮಾರು ಅದೇ ಅನುಪಾತದಲ್ಲಿರತಕ್ಕದ್ದು" ಎಂದಿರುತ್ತದೆ.

4) ಸದರಿ ಅಧಿನಿಯಮದ ಪ್ರಕರಣ 44ರ ಉಪಪ್ರಕರಣ 2(ಬಿ) ಪ್ರಕಾರ ರಾಜ್ಯದ ಗ್ರಾಮ ಪಂಚಾಯತಿಯ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಹುದ್ದೆಗಳ ಸಂಖ್ಯೆಯ ಸರಿ ಸುಮಾರು 1/3ರ ಸಂಖ್ಯೆಯಷ್ಟು ಹುದ್ದೆಗಳನ್ನು ಹಿಂದುಳಿದ ವರ್ಗದವರಿಗಾಗಿ ಮೀಸಲಿಡತಕ್ಕದ್ದು. ಹಾಗೆ ನಿರ್ಧರಿಸಿ ಮೀಸಲಿರಿಸಿದ ಸಂದರ್ಭದಲ್ಲಿ ಒಂದು ವೇಳೆ ಅನುಸೂಚಿತ ಜಾತಿ, ಅನುಸೂಚಿತ ಪಂಗಡ ಮತ್ತು ಹಿಂದುಳಿದ ವರ್ಗದವರಿಗಾಗಿ ಮೀಸಲಿರಿಸಬೇಕಾದ ಹುದ್ದೆಗಳ ಒಟ್ಟು ಸಂಖ್ಯೆಯು ರಾಜ್ಯದಲ್ಲಿಆ ಗ್ರಾಮ ಪಂಚಾಯತಿಯ ಒಟ್ಟು ಹುದ್ದೆಗಳ ಸಂಖ್ಯೆಯ ಶೇಕಡ ಐವತ್ತನ್ನು ಮೀರತಕ್ಕದ್ದಲ್ಲ ಎಂದಿರುತ್ತದೆ.

5) ಮೇಲ್ಕಂಡ ಕಂಡಿಕೆ (4) ರ ಅನುಸಾರ ಹುದ್ದೆಗಳನ್ನು ನಿಗದಿಪಡಿಸುವ ಸಂದರ್ಭದಲ್ಲಿ ಒಂದು ವೇಳೆ ಅನುಸೂಚಿತ ಜಾತಿ, ಅನುಸೂಚಿತ ಪಂಗಡ ಮತ್ತು ಹಿಂದುಳಿದ ವರ್ಗದವರಿಗಾಗಿ ಮೀಸಲಿರಿಸಬೇಕಾದ ಹುದ್ದೆಗಳ ಒಟ್ಟು ಸಂಖ್ಯೆಯು ಗ್ರಾಮ ಪಂಚಾಯತಿಗಳ ಒಟ್ಟು ಹುದ್ದೆಗಳ ಸಂಖ್ಯೆಯ ಶೇಕಡ ಐವತ್ತನ್ನು ಮೀರುವ ಸಂದರ್ಭದಲ್ಲಿ ಅನುಸೂಚಿತ ಜಾತಿ ಮತ್ತು ಅನುಸೂಚಿತ ಪಂಗಡಗಳಿಗೆ ನಿಗದಿಪಡಿಸಿದ ಹುದ್ದೆಗಳಲ್ಲಿ ಯಾವುದೇ ಬದಲಾವಣೆ ಮಾಡದೆ ಹಿಂದುಳಿದ ವರ್ಗಕ್ಕೆ ನಿಗದಿಪಡಿಸಿದಹುದ್ದೆಗಳಲ್ಲಿ ಕಡಿತಗೊಳಿಸಿ, ಆ ಮೂರು ಪ್ರವರ್ಗದ ಹುದ್ದೆಗಳ ಸಂಖ್ಯೆಗಳನ್ನು ಗ್ರಾಮ ಪಂಚಾಯತಿಗಳ ಒಟ್ಟು ಹುದ್ದೆಗಳ ಶೇಕಡ ಐವತ್ತಕ್ಕೆ ಮಿತಿಗೊಳಿಸಬೇಕಾಗುತ್ತದೆ.ಹೀಗೆ ಹಿಂದುಳಿದ ವರ್ಗದವರಿಗೆ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಹುದ್ದೆಗಳನ್ನು ನಿಗದಿಪಡಿಸಿದ ನಂತರ ಈ ಪೈಕಿ ಹಿಂದುಳಿದ ವರ್ಗ "ಅ" ಕ್ಕೆ ಶೇಕಡ 80 ರಷ್ಟು ಮತ್ತು ಹಿಂದುಳಿದ ವರ್ಗ "ಬ" ಕ್ಕೆ ಶೇಕಡ 20ರಷ್ಟು ಹುದ್ದೆಗಳನ್ನು ಮೀಸಲಿರಿಸತಕ್ಕದ್ದು.

6) ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 44(2)(ಸಿ) ರಂತೆ ಅನುಸೂಚಿತ ಜಾತಿ, ಅನುಸೂಚಿತ ಪಂಗಡ, ಹಿಂದುಳಿದ ವರ್ಗ ಮತ್ತು ಸಾಮಾನ್ಯ ವರ್ಗ ಹೀಗೆ ಪ್ರತಿಯೊಂದು ಪ್ರವರ್ಗಕ್ಕೂ ಮೀಸಲಿಟ್ಟಿರುವ ಹುದ್ದೆಗಳಲ್ಲಿ

ಶೇಕಡ ಐವತ್ತಕ್ಕೆ ಕಡಿಮೆ ಇಲ್ಲದಷ್ಟು ಹುದ್ದೆಗಳನ್ನು ಮಹಿಳೆಯರಿಗಾಗಿ ಒಟ್ಟಾರೆಯಾಗಿ ರಾಜ್ಯದ ಗ್ರಾಮ ಪಂಚಾಯತಿಗಳ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಹುದ್ದೆಗಳ ಒಟ್ಟು ಸಂಖ್ಯೆಯ ಅರ್ಧದಷ್ಟು ಪರಿಮಿತಿಗೆ ಒಳಪಟ್ಟು ಮುಂದಿನ ಸಂಖ್ಯೆಗೆ ಪೂರ್ಣಾಂಕಗೊಳಿಸಿದಷ್ಟು ಮೀಸಲಿಡತಕ್ಕದ್ದು.

7) ಮೇಲ್ಕಂಡ ಕಂಡಿಕೆ (6) ರಂತೆ ಹುದ್ದೆಗಳನ್ನು ಮೀಸಲಿರಿಸುವ ಸಂದರ್ಭದಲ್ಲಿ ಗ್ರಾಮ ಪಂಚಾಯತಿಯ ಒಟ್ಟು ಹುದ್ದೆಗಳ ಸಂಖ್ಯೆಯಲ್ಲಿ ಮಹಿಳಾ ಮೀಸಲು ಹುದ್ದೆಗಳು ಅರ್ಧಕ್ಕಿಂತ (50%) ಹೆಚ್ಚು ಬಂದಲ್ಲಿ ಅಂತಹ ಹೆಚ್ಚುವರಿ ಮಹಿಳಾ ಹುದ್ದೆಯನ್ನು "ಸಾಮಾನ್ಯ ವರ್ಗದ ಮಹಿಳೆ" ಗೆ (Unreserved Women) ನಿಗದಿಪಡಿಸಿರುವ ಹುದ್ದೆಯ ಸಂಖ್ಯೆಯಲ್ಲಿ ಕಡಿತಗೊಳಿಸಿ, ಆ ಹುದ್ದೆಯನ್ನು "ಸಾಮಾನ್ಯ ವರ್ಗ" (Unreserved) ದ "ಸಾಮಾನ್ಯ" ಹುದ್ದೆಯಲ್ಲಿ ಹೆಚ್ಚಿಗೆ ಮಾಡಿ ಒಟ್ಟಾರೆ ತಾಲ್ಲೂಕಿನ ಒಟ್ಟು ಹುದ್ದೆಗಳ ಸಂಖ್ಯೆಯ ಅರ್ಧದಷ್ಟು ಪರಿಮಿತಿಗೆ ಮಹಿಳಾ ಹುದ್ದೆಗಳನ್ನು ಸೀಮಿತಗೊಳಿಸುವುದು.

8) ಕೆಲವು ಸಂದರ್ಭಗಳಲ್ಲಿ ಯಾವುದೇ ಮೀಸಲಿರಿಸಿದ ವರ್ಗದ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಹುದ್ದೆಗಳನ್ನು ನಿಗದಿಪಡಿಸುವಾಗ ಒಂದು ವೇಳೆ ಸದಸ್ಯರ ಸಂಖ್ಯೆಗಳು ಸಮವಾಗಿರುವ ಗ್ರಾಮಪಂಚಾಯತಿಗಳು ಹಲವು ಇದ್ದು ಮೀಸಲಿರಿಸಬೇಕಾದ ಹುದ್ದೆಗಳು ಇಂತಹ ಗ್ರಾಮಪಂಚಾಯತಿಗಳ ಸಂಖ್ಯೆಗಿಂತ ಕಡಿಮೆಯಿದ್ದಲ್ಲಿ ಅಂತಹ ಗ್ರಾಮಪಂಚಾಯತಿಗಳ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಹುದ್ದೆಗಳ ಮೀಸಲಾತಿಯನ್ನು ಸಂಬಂಧಪಟ್ಟ ಗ್ರಾಮ ಪಂಚಾಯತಿಗಳ ಚುನಾಯಿತ ಸದಸ್ಯರುಗಳ ಸಮ್ಮುಖದಲ್ಲಿ ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಚುನಾವಣಾಧಿಕಾರಿ ರವರು ಲಾಟರಿ ಎತ್ತುವ ಮೂಲಕ ನಿಗದಿಪಡಿಸಬೇಕಾಗಿರುತ್ತದೆ.

9) ಈ ಮೇಲ್ಕಂಡ ಕಂಡಿಕೆ 2 ರಿಂದ 8 ರಲ್ಲಿ ವಿವರಿಸಿದ ಕಾರಣಗಳಿಂದ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 44 ರ ಉಪಪ್ರಕರಣ (2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ರಾಜ್ಯ ಚುನಾವಣಾ ಆಯೋಗವುರಾಜ್ಯದ 6008 ಗ್ರಾಮ ಪಂಚಾಯತಿಗಳಿಗೆ ತಾಲ್ಲೂಕುವಾರು ವರ್ಗವಾರು 2015 ನೇ ಸಾಲಿನ ಚುನಾವಣೆ ಮುಗಿದ ನಂತರ ಮುಂದಿನಐದು ವರ್ಷಗಳ ಅವಧಿಗೆ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಹುದ್ದೆಗಳ ಸಂಖ್ಯೆಗಳನ್ನು ನಿರ್ದಿಷ್ಟಪಡಿಸಿ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ರಾಜ್ಯ ಚುನಾವಣಾ ಆಯೋಗದ ಆದೇಶ ಸಂಖ್ಯೆ: ರಾಚುಆ 170ಇಜಿಪಿ 2015,**
**ಬೆಂಗಳೂರು, ದಿನಾಂಕ: 25-05-2015**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ, ಸಂವಿಧಾನದ ಅನುಚ್ಛೇದ 243ಕೆ ಅಡಿಯಲ್ಲಿ ಗ್ರಾಮೀಣ ಸಂಸ್ಥೆಗಳಿಗೆ ಚುನಾವಣೆಗಳನ್ನು ನಡೆಸಲು ಸಮಸ್ತ ಅಧಿಕಾರಗಳನ್ನು ರಾಜ್ಯ ಚುನಾವಣಾ ಆಯೋಗಕ್ಕೆ ಕೊಡಲಾಗಿದೆ. ಅದರಂತೆ ಚುನಾವಣೆಗಳ ವಿಷಯದಲ್ಲಿ ಅಧಿನಿಯಮ/ ನಿಯಮಗಳ ಮೂಲಕ ಸ್ಪಷ್ಟಪಡಿಸದ ಚುನಾವಣಾ ಸಂಬಂಧದ ಕರ್ತವ್ಯಗಳ ಬಗ್ಗೆ ಆದೇಶ/ ನಿರ್ದೇಶನಗಳನ್ನು ನೀಡಲು ರಾಜ್ಯ ಚುನಾವಣಾ ಆಯೋಗವು ಮೇಲೆ ಹೇಳಿದ ಅನುಚ್ಛೇದದ ಅಡಿಯಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಕಾರ್ಯ ನಿರ್ವಹಿಸಬಹುದಾಗಿರುತ್ತದೆ.

2) ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993 ಪ್ರಕರಣ 44ರ ಉಪಪ್ರಕರಣ (2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ರಾಜ್ಯ ಚುನಾವಣಾ ಆಯೋಗವು ರಾಜ್ಯದ 6008 ಗ್ರಾಮ ಪಂಚಾಯತಿಗಳಿಗೆ ಅನುಸೂಚಿತ ಜಾತಿ, ಅನುಸೂಚಿತ ಪಂಗಡ, ಹಿಂದುಳಿದ ವರ್ಗ (ಅ), ಹಿಂದುಳಿದ (ಬ) ಮತ್ತು ಸಾಮಾನ್ಯ ವರ್ಗಗಳಿಗೆ ಹಾಗೂ ಈ ಪ್ರವರ್ಗಗಳಲ್ಲಿ ಮಹಿಳೆಯರಿಗೆ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಹುದ್ದೆಗಳ ಸಂಖ್ಯೆಗಳನ್ನು ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ನಮೂದಿಸಿದಂತೆ ರಾಜ್ಯದಲ್ಲಿರುವ ಎಲ್ಲಾ ತಾಲ್ಲೂಕುಗಳಿಗೆ ನಿರ್ದಿಷ್ಟಪಡಿಸಲಾಗಿದೆ. ಅನುಸೂಚಿತ ಜಾತಿ ಮತ್ತು ಅನುಸೂಚಿತ ಪಂಗಡಗಳ ಹುದ್ದೆಗಳನ್ನು ಆಯಾಯ ತಾಲ್ಲೂಕಿನ ಜನಸಂಖ್ಯೆಯ ಆಧಾರದ ಮೇಲೆ ನಿಗದಿಪಡಿಸಿದೆ.

3) ಆಯಾ ಜಿಲ್ಲಾಧಿಕಾರಿಗಳು ತಾಲ್ಲೂಕುವಾರು ವಿವಿಧ ವರ್ಗಗಳಿಗೆ ಮತ್ತು ಮಹಿಳೆಯರಿಗೆ ಹಾಗೂ ಸಾಮಾನ್ಯ ವರ್ಗಕ್ಕೆ ನಿಗದಿಪಡಿಸಲಾಗಿರುವ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಹುದ್ದೆಗಳನ್ನು ಈ ಕೆಳಗೆ ವಿವರಿಸಿರುವ ಪ್ರಕಾರ ತಾಲ್ಲೂಕಿನ ಗ್ರಾಮಪಂಚಾಯತಿಗಳಿಗೆ ಮೀಸಲಿರಿಸಿ ನಿಗದಿಪಡಿಸತಕ್ಕದ್ದು.

i. ಅಧ್ಯಕ್ಷ ಮತ್ತು ಉಪಾಧ್ಯಕ್ಷ ಹುದ್ದೆಗಳನ್ನು ಗ್ರಾಮ ಪಂಚಾಯತಿಗಳಿಗೆ ಅನುಸೂಚಿತ ಜಾತಿ, ಅನುಸೂಚಿತ ಪಂಗಡ, ಹಿಂದುಳಿದ ವರ್ಗ (ಅ) ಹಿಂದುಳಿದ ವರ್ಗ(ಬ), ಸಾಮಾನ್ಯ (ಮಹಿಳೆ) ಮತ್ತು ಸಾಮಾನ್ಯ ಈ ಕ್ರಮದಲ್ಲಿಯೇ ನಿಗದಿಪಡಿಸತಕ್ಕದ್ದು. ಅಂದರೆ ಮೊದಲು ಅನುಸೂಚಿತ ಜಾತಿ ಅಧ್ಯಕ್ಷ ಹುದ್ದೆಯನ್ನು ಪಡೆಯುವ ಗ್ರಾಮಪಂಚಾಯತಿಗಳನ್ನು ನಿಗದಿಪಡಿಸಿದ ನಂತರ ಅನುಸೂಚಿತ ಪಂಗಡ ಅಧ್ಯಕ್ಷ ಹುದ್ದೆ, ಹಿಂದುಳಿದ ವರ್ಗ (ಅ) ಅಧ್ಯಕ್ಷ ಹುದ್ದೆ, ಹಿಂದುಳಿದ ವರ್ಗ (ಬ) ಅಧ್ಯಕ್ಷ ಹುದ್ದೆ ಹೀಗೆ ಒಂದಾದ ನಂತರ ಒಂದನ್ನು ತಾಲ್ಲೂಕಿನಲ್ಲಿರುವ ಗ್ರಾಮ ಪಂಚಾಯತಿಗಳಿಗೆ ನಿಗದಿಪಡಿಸತಕ್ಕದ್ದು. ಉಪಾಧ್ಯಕ್ಷರ ಹುದ್ದೆಗಳನ್ನು ನಿಗದಿಪಡಿಸುವಾಗಲೂ ಮೇಲೆ ವಿವರಿಸಿದ ಕ್ರಮವನ್ನೇ ಅನುಸರಿಸತಕ್ಕದ್ದು.

ii. ಅನುಸೂಚಿತ ಜಾತಿ ಅಧ್ಯಕ್ಷ ಹುದ್ದೆಯನ್ನು ನಿಗದಿಪಡಿಸುವಾಗ ಆ ಜನಾಂಗದ ಸದಸ್ಯರುಗಳ ಸಂಖ್ಯೆ ಅತ್ಯಂತ ಹೆಚ್ಚು ಇರುವ ಗ್ರಾಮಪಂಚಾಯತಿಯನ್ನು ಗುರುತಿಸಿ ಆ ಗ್ರಾಮ ಪಂಚಾಯತಿಗಳಿಗೆ ಅನುಸೂಚಿತ ಜಾತಿ ಅಧ್ಯಕ್ಷರ ಹುದ್ದೆಯನ್ನು ನಿಗದಿಪಡಿಸತಕ್ಕದ್ದು. ಹೀಗೆ ಮಾಡುವಾಗ ತಾಲ್ಲೂಕಿನ ಗ್ರಾಮಪಂಚಾಯತಿಗಳಲ್ಲಿ ಅನುಸೂಚಿತ ಜಾತಿ ಸದಸ್ಯ ಸ್ಥಾನಗಳ ಆಧಾರದ ಮೇಲೆ ಅವರೋಹಣ ಕ್ರಮದಲ್ಲಿ (Descending Order) ಗ್ರಾಮ ಪಂಚಾಯತಿಯನ್ನು/ ಗಳನ್ನು ಬರೆದುಕೊಂಡು ನಂತರ ನಿರ್ಧರಿಸತಕ್ಕದ್ದು. ಈ ರೀತಿ ಮಾಡುವಾಗ **ಸರದಿಯಂತೆ (ರೊಟೇಷನ್) ಅಂದರೆ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ಪ್ರಕರಣ 44 ರ ವಿವರಣೆಯಂತೆ "ಈ ಪ್ರಕರಣದಡಿಯಲ್ಲಿ ಹುದ್ದೆಯ ಮೀಸಲಾತಿಯ ಸರದಿ ಸೂತ್ರವು 1993 ರ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮವು ಪ್ರಾರಂಭವಾದ ನಂತರ ನಡೆಸುವ ಪ್ರಥಮ ಚುನಾವಣೆಯಿಂದ ಪ್ರಾರಂಭವಾಗತಕ್ಕದ್ದೆಂದು ಈ ಮೂಲಕ ಘೋಷಿಸಲಾಗಿದೆ". ಅದರಂತೆ** ಪ್ರಸ್ತಾವನೆಯ ಕಂಡಿಕೆ(2) ರಲ್ಲಿ ವಿವರಿಸಿರುವಂತೆ ಕ್ರಮವಹಿಸಿಅನುಸೂಚಿತ ಜಾತಿ ಅಧ್ಯಕ್ಷ ಹುದ್ದೆಯನ್ನು ಮೀಸಲಿರಿಸಲಾಗಿದ್ದ ಗ್ರಾಮಪಂಚಾಯತಿಗಳನ್ನು ಹೊರತುಪಡಿಸತಕ್ಕದ್ದು. ಅನುಸೂಚಿತ ಜಾತಿಗೆ ಮೀಸಲಿರಿಸಲಾದ ಉಪಾಧ್ಯಕ್ಷರುಗಳ

ಹುದ್ದೆಯನ್ನು ನಿಗದಿಪಡಿಸುವಾಗಲೂ ಇದೇ ಕ್ರಮವನ್ನು ಅನುಸರಿಸತಕ್ಕದ್ದು. ಅನುಸೂಚಿತ ಪಂಗಡದ ಅಧ್ಯಕ್ಷ / ಉಪಾಧ್ಯಕ್ಷ ಹುದ್ದೆಗಳನ್ನು ಇದೇ ಕ್ರಮವನ್ನು ಅನುಸರಿಸಿ ಮೀಸಲಿರಿಸತಕ್ಕದ್ದು.

iii. ಹಿಂದುಳಿದ ವರ್ಗ (ಅ) ಮತ್ತು ಹಿಂದುಳಿದ ವರ್ಗ (ಬ) ಪ್ರವರ್ಗಗಳಿಗೆ ಮೀಸಲಿರಿಸಲಾದ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಹುದ್ದೆಗಳನ್ನು ಈ ಪ್ರವರ್ಗದ ಅತಿ ಹೆಚ್ಚು ಸದಸ್ಯ ಸಂಖ್ಯೆಯಿರುವ ಗ್ರಾಮ ಪಂಚಾಯತಿಗಳಿಗೆ ಪ್ಯಾರ (ii) ರಲ್ಲಿ ಸೂಚಿಸಿರುವ ಕ್ರಮವನ್ನು ಅನುಸರಿಸಿ ನಿಗದಿಪಡಿಸತಕ್ಕದ್ದು.

iv. ಮೀಸಲಿರಿಸಿದ ಪ್ರವರ್ಗಗಳ ಮಹಿಳಾ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಹುದ್ದೆಯನ್ನು ನಿಗದಿಪಡಿಸುವಾಗ ಮೊದಲು ಆ ಪ್ರವರ್ಗಗಳ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಹುದ್ದೆಯನ್ನು ಪಡೆಯುವ ಗ್ರಾಮ ಪಂಚಾಯತಿಗಳನ್ನು ಗುರುತಿಸಿ ಅವುಗಳನ್ನು ಮೀಸಲಿರಿಸಿದ ಆ ಪ್ರವರ್ಗಕ್ಕೆ ಸೇರಿದ ಮಹಿಳಾ ಸದಸ್ಯ ಸಂಖ್ಯೆಗೆ ಅನುಗುಣವಾಗಿ ಅವರೋಹಣ ಕ್ರಮದಲ್ಲಿ (Descending Order) ಬರೆದುಕೊಂಡು ನಂತರ ಅಂತಹ ಗ್ರಾಮಪಂಚಾಯತಿಗಳಲ್ಲಿ ಆ ಮಹಿಳಾ ಸದಸ್ಯ ಸಂಖ್ಯೆಯನ್ನು ಗಣನೆಗೆ ತೆಗೆದುಕೊಂಡು ಅತಿ ಹೆಚ್ಚು ಮಹಿಳಾ ಸದಸ್ಯರಿರುವ ಗ್ರಾಮಪಂಚಾಯತಿಗಳಿಗೆ ಮಹಿಳಾ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಹುದ್ದೆಗಳನ್ನು ನಿಗದಿಪಡಿಸತಕ್ಕದ್ದು. ಹೀಗೆ ಮಾಡುವಾಗ ಸಾಧ್ಯವಾದಷ್ಟು ಮಟ್ಟಿಗೆ ಹಿಂದಿನ ಅವಧಿಯಲ್ಲಿ ಮಹಿಳಾ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಹುದ್ದೆಗಳನ್ನು ಪಡೆದಿದ್ದ ಗ್ರಾಮ ಪಂಚಾಯತಿಗಳನ್ನು ಹೊರತುಪಡಿಸತಕ್ಕದ್ದು.

v. ಸಾಮಾನ್ಯ (ಮಹಿಳೆ) ವರ್ಗಕ್ಕೆ ಮೀಸಲಿರಿಸಲಾದ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಹುದ್ದೆಗಳನ್ನು ಆ ವರ್ಗದ ಅತಿ ಹೆಚ್ಚು ಸದಸ್ಯ ಸಂಖ್ಯೆಯಿರುವ ಗ್ರಾಮಪಂಚಾಯತಿಗಳನ್ನು ಗುರುತಿಸಿ ನಿಗದಿಪಡಿಸತಕ್ಕದ್ದು. ಹೀಗೆ ನಿಗದಿಪಡಿಸುವಾಗ ಸಾಧ್ಯವಾದಷ್ಟು ಮಟ್ಟಿಗೆ ಹಿಂದಿನ ಅವಧಿ / ಅವಧಿಗಳಲ್ಲಿ ಈ ವರ್ಗಕ್ಕೆ ಮೀಸಲಿರಿಸಲಾದ ಗ್ರಾಮ ಪಂಚಾಯತಿಗಳನ್ನು ಹೊರತುಪಡಿಸತಕ್ಕದ್ದು.

vi. ಯಾವುದೇ ಮೀಸಲಿರಿಸಿದ ವರ್ಗದ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಹುದ್ದೆಗಳನ್ನು ನಿಗದಿಪಡಿಸುವಾಗ ಒಂದು ವೇಳೆ ಸದಸ್ಯರ ಸಂಖ್ಯೆಗಳು ಸಮವಾಗಿರುವ ಗ್ರಾಮಪಂಚಾಯತಿಗಳು ಹಲವು ಇದ್ದು ಮೀಸಲಿರಿಸಬೇಕಾದ ಹುದ್ದೆಗಳು ಇಂತಹ ಗ್ರಾಮಪಂಚಾಯತಿಗಳ ಸಂಖ್ಯೆಗಿಂತ ಕಡಿಮೆಯಿದ್ದಲ್ಲಿ ಅಂತಹ ಗ್ರಾಮಪಂಚಾಯತಿಗಳ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಹುದ್ದೆಗಳ ಮೀಸಲಾತಿಯನ್ನು ಸಂಬಂಧಪಟ್ಟ ಗ್ರಾಮ ಪಂಚಾಯತಿಗಳ ಚುನಾಯಿತ ಸದಸ್ಯರುಗಳ ಸಮ್ಮುಖದಲ್ಲಿ ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಚುನಾವಣಾಧಿರವರು ಲಾಟರಿ ಎತ್ತುವ ಮೂಲಕ ನಿಗದಿಪಡಿಸತಕ್ಕದ್ದು.

vii. ಅಧ್ಯಕ್ಷ ಮತ್ತು ಉಪಾಧ್ಯಕ್ಷ ಹುದ್ದೆಗಳನ್ನು ನಿಗದಿಪಡಿಸುವಾಗ ಒಂದೇ ಗ್ರಾಮಪಂಚಾಯತಿಯಲ್ಲಿ ಈ ಕೆಳಕಂಡ ವರ್ಗಗಳನ್ನು ಏಕ ಕಾಲದಲ್ಲಿ ಸಾಧ್ಯವಾದಷ್ಟು ಮಟ್ಟಿಗೆ ನಿಗದಿಪಡಿಸತಕ್ಕದ್ದಲ್ಲ.

| **ಅಧ್ಯಕ್ಷ** | **ಉಪಾಧ್ಯಕ್ಷ** |
|---|---|
| ಅನುಸೂಚಿತ ಜಾತಿ | ಅನುಸೂಚಿತ ಪಂಗಡ |
| ಅನುಸೂಚಿತ ಜಾತಿ | ಅನುಸೂಚಿತ ಜಾತಿ |
| ಅನುಸೂಚಿತ ಪಂಗಡ | ಅನುಸೂಚಿತ ಜಾತಿ |
| ಅನುಸೂಚಿತ ಪಂಗಡ | ಅನುಸೂಚಿತ ಪಂಗಡ |
| ಹಿಂದುಳಿದ ವರ್ಗ (ಎ) | ಹಿಂದುಳಿದ ವರ್ಗ (ಎ) |
| ಹಿಂದುಳಿದ ವರ್ಗ (ಬ) | ಹಿಂದುಳಿದ ವರ್ಗ (ಬ) |
| ಮಹಿಳೆ | ಮಹಿಳೆ |

4) ತಾಲ್ಲೂಕುವಾರು ಅಧ್ಯಕ್ಷ ಮತ್ತು ಉಪಾಧ್ಯಕ್ಷ ಹುದ್ದೆಗಳನ್ನು ನಿಗದಿಪಡಿಸುವಾಗ ಮೊದಲು ಎಲ್ಲಾ ಅಧ್ಯಕ್ಷ ಹುದ್ದೆಗಳನ್ನು ನಿಗದಿಪಡಿಸಿ ನಂತರ ಉಪಾಧ್ಯಕ್ಷ ಹುದ್ದೆಯನ್ನು ನಿಗದಿಪಡಿಸತಕ್ಕದ್ದು.

5) ಆಯೋಗವು ರಾಜ್ಯದ6008 ಗ್ರಾಮ ಪಂಚಾಯತಿಗಳನ್ನು ಗಣನೆಗೆ ತೆಗೆದುಕೊಂಡು ತಾಲ್ಲೂಕುವಾರು, ವರ್ಗವಾರು ಅಧ್ಯಕ್ಷ ಮತ್ತು ಉಪಾಧ್ಯಕ್ಷ ಹುದ್ದೆಗಳ ಸಂಖ್ಯೆಗಳನ್ನು ಅನುಬಂಧದಲ್ಲಿರುವಂತೆ ನಿಗದಿಪಡಿಸಿದೆ. ಆದ್ದರಿಂದ ಜಿಲ್ಲಾಧಿಕಾರಿಗಳು ತಾಲ್ಲೂಕಿನಲ್ಲಿರುವ ಎಲ್ಲಾ ಗ್ರಾಮ ಪಂಚಾಯತಿಗಳನ್ನು (ಚುನಾವಣೆ ನಡೆದಿರುವ ಮತ್ತು ಅವಧಿ ಮುಗಿಯದ) ಗಣನೆಗೆ ತೆಗೆದುಕೊಂಡು ಆಯೋಗವು ವರ್ಗವಾರು ನಿಗದಿಪಡಿಸಿರುವ ಎಲ್ಲಾ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಹುದ್ದೆಗಳನ್ನು ಹಂಚಿಕೆ ಮಾಡಲು ಕ್ರಮ ಕೈಗೊಳ್ಳತಕ್ಕದ್ದು.

6) ರಾಜ್ಯದಲ್ಲಿ ಇನ್ನು ಮುಂದೆ ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮದ ಪ್ರಕರಣ 4ರನ್ವಯ ಹೊಸದಾಗಿ ರಚಿತವಾಗುವ ಯಾವುದೇ ಗ್ರಾಮಪಂಚಾಯತಿಗಳಿಗೆ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಹುದ್ದೆಗಳ ಮೀಸಲಾತಿಯನ್ನು ರಾಜ್ಯ ಚುನಾವಣಾ ಆಯೋಗದ ಪೂರ್ವಾನುಮತಿಯನ್ನು ಪಡೆದು ನಿರ್ಧರಿಸತಕ್ಕದ್ದು.

7) ಹುದ್ದೆಗಳ ಮೀಸಲಾತಿಯನ್ನು ನಿಗದಿಪಡಿಸಿದ ನಂತರ ಅಧಿಸೂಚನೆಗಳನ್ನು ರಾಜ್ಯಪತ್ರದಲ್ಲಿ ಪ್ರಕಟಿಸತಕ್ಕದ್ದು. ಪ್ರಕಟಿತ ರಾಜ್ಯಪತ್ರ ಪ್ರತಿಯೊಂದಿಗೆ ಗ್ರಾಮ ಪಂಚಾಯತಿವಾರು ವಿವರ ಮತ್ತು ಮೀಸಲಾತಿ ನಿಗದಿಪಡಿಸಿದ ಬಗ್ಗೆ ಸಮರ್ಥನೆಯೊಂದಿಗೆ ನಡವಳಿಗಳು ಇತ್ಯಾದಿ ಪೂರ್ಣ ಮಾಹಿತಿಯನ್ನು ಅಯೋಗಕ್ಕೆ ಕಳುಹಿಸಿಕೊಡತಕ್ಕದ್ದೆಂದು ಸೂಚಿಸಲಾಗಿದೆ.

ಆದೇಶಾನುಸಾರ

**ಆರ್. ಚಂದ್ರಶೇಖರ್**
ಅಧೀನ ಕಾರ್ಯದರ್ಶಿ
ರಾಜ್ಯ ಚುನಾವಣಾ ಆಯೋಗ

**ಅನುಬಂಧ**

(ರಾಜ್ಯ ಚುನಾವಣಾ ಆಯೋಗದ ಸಂಖ್ಯೆ: ರಾಚುಆ.170.ಇಜಿಪಿ.2015, ದಿನಾಂಕ: 25–05–2015)

**ಗ್ರಾಮ ಪಂಚಾಯತಿಗಳ ಅಧ್ಯಕ್ಷ / ಉಪಾಧ್ಯಕ್ಷ ಹುದ್ದೆಗಳು**

| ಕ್ರ. ಸಂ | ತಾಲ್ಲೂಕು | ಒಟ್ಟು ಗ್ರಾ.ಪಂ/ ಹುದ್ದೆಗಳ ಸಂಖ್ಯೆ | ಅ.ಜಾ | ಅ.ಪಂ | ಹಿಂ. 'ಅ' ವರ್ಗ | ಹಿಂ. 'ಬ' ವರ್ಗ | ಸಾಮಾನ್ಯ |
|---|---|---|---|---|---|---|---|
| **1** | **2** | **3** | **4** | **5** | **6** | **7** | **8** |
| | | | **ಬೆಂಗಳೂರು ನಗರ** | | | | |
| 1 | ಬೆಂಗಳೂರು ಉತ್ತರ | 39(20) | 11(6) | 2(1) | 5(2) | 1(1) | 20(10) |
| 2 | ಬೆಂಗಳೂರು ದಕ್ಷಿಣ | 18(9) | 6(3) | 1(1) | 2(1) | 0(0) | 9(4) |
| 3 | ಬೆಂಗಳೂರು ಪೂರ್ವ | 11(6) | 4(2) | 0(0) | 1(1) | 0(0) | 6(3) |
| 4 | ಆನೇಕಲ್ | 28(14) | 13(7) | 1(1) | 0(0) | 0(0) | 14(6) |
| | | | **ಬೆಂಗಳೂರು ಗ್ರಾಮಾಂತರ** | | | | |
| 1 | ಹೊಸಕೋಟೆ | 28(14) | 8(4) | 1(1) | 4(2) | 1(1) | 14(6) |
| 2 | ದೊಡ್ಡಬಳ್ಳಾಪುರ | 29(15) | 8(4) | 2(1) | 3(2) | 1(0) | 15(8) |
| 3 | ದೇವನಹಳ್ಳಿ | 24(12) | 6(3) | 3(2) | 2(2) | 1(0) | 12(5) |
| 4 | ನೆಲಮಂಗಲ | 24(12) | 6(3) | 1(1) | 4(2) | 1(1) | 12(5) |
| | | | **ರಾಮನಗರ** | | | | |
| 1 | ರಾಮನಗರ | 20(10) | 4(2) | 1(1) | 4(2) | 1(1) | 10(4) |
| 2 | ಕನಕಪುರ | 43(22) | 10(5) | 1(1) | 8(4) | 2(1) | 22(11) |
| 3 | ಮಾಗಡಿ | 32(16) | 6(3) | 1(1) | 7(4) | 2(1) | 16(7) |
| 4 | ಚನ್ನಪಟ್ಟಣ | 32(16) | 6(3) | 0(0) | 8(4) | 2(1) | 16(8) |
| | | | **ಚಿತ್ರದುರ್ಗ** | | | | |
| 1 | ಚಿತ್ರದುರ್ಗ | 38(19) | 12(6) | 9(5) | 0(0) | 0(0) | 17(8) |
| 2 | ಚಳ್ಳಕೆರೆ | 40(20) | 11(6) | 14(7) | 0(0) | 0(0) | 15(7) |
| 3 | ಮೊಳಕಾಲ್ಮೂರು | 16(8) | 4(2) | 8(4) | 0(0) | 0(0) | 4(2) |
| 4 | ಹಿರಿಯೂರು | 33(17) | 10(5) | 4(2) | 2(1) | 0(0) | 17(9) |
| 5 | ಹೊಳಲ್ಕೆರೆ | 29(15) | 9(5) | 4(2) | 1(1) | 0(0) | 15(7) |
| 6 | ಹೊಸದುರ್ಗ | 33(17) | 7(4) | 3(2) | 5(2) | 1(1) | 17(8) |
| | | | **ದಾವಣಗೆರೆ** | | | | |
| 1 | ದಾವಣಗೆರೆ | 42(21) | 9(5) | 6(3) | 5(2) | 1(1) | 21(10) |
| 2 | ಹರಿಹರ | 25(13) | 4(2) | 3(2) | 4(2) | 1(1) | 13(6) |
| 3 | ಹೊನ್ನಾಳಿ | 47(24) | 8(4) | 3(2) | 10(5) | 2(1) | 24(12) |
| 4 | ಚನ್ನಗಿರಿ | 61(31) | 12(6) | 6(3) | 10(5) | 2(1) | 31(16) |

| ಕ್ರ. ಸಂ | ತಾಲ್ಲೂಕು | ಒಟ್ಟು ಗ್ರಾ.ಪಂ/ ಹುದ್ದೆಗಳ ಸಂಖ್ಯೆ | ಅ.ಜಾ | ಅ.ಪಂ | ಹಿಂ. 'ಅ' ವರ್ಗ | ಹಿಂ. 'ಬ' ವರ್ಗ | ಸಾಮಾನ್ಯ |
|---|---|---|---|---|---|---|---|
| **1** | **2** | **3** | **4** | **5** | **6** | **7** | **8** |
| 5 | ಹರಪನಹಳ್ಳಿ | 37(19) | 11(6) | 7(4) | 0(0) | 0(0) | 19(9) |
| 6 | ಜಗಳೂರು | 22(11) | 6(3) | 6(3) | 0(0) | 0(0) | 10(5) |
| | | | **ಕೋಲಾರ** | | | | |
| 1 | ಕೋಲಾರ | 36(18) | 12(6) | 2(1) | 3(2) | 1(0) | 18(9) |
| 2 | ಮಾಲೂರು | 28(14) | 9(5) | 3(2) | 2(1) | 0(0) | 14(6) |
| 3 | ಬಂಗಾರಪೇಟೆ | 37(19) | 14(7) | 1(1) | 2(2) | 1(0) | 19(9) |
| 4 | ಶ್ರೀನಿವಾಸಪುರ | 25(13) | 8(4) | 3(2) | 1(1) | 0(0) | 13(6) |
| 5 | ಮುಳಬಾಗಿಲು | 30(15) | 11(6) | 1(1) | 2(2) | 1(0) | 15(6) |
| | | | **ಚಿಕ್ಕಬಳ್ಳಾಪುರ** | | | | |
| 1 | ಚಿಕ್ಕಬಳ್ಳಾಪುರ | 23(12) | 7(4) | 3(2) | 1(1) | 0(0) | 12(5) |
| 2 | ಚಿಂತಾಮಣಿ | 35(18) | 10(5) | 5(3) | 2(1) | 0(0) | 18(9) |
| 3 | ಗೌರಿಬಿದನೂರು | 38(19) | 11(6) | 7(4) | 1(1) | 0(0) | 19(8) |
| 4 | ಬಾಗೇಪಲ್ಲಿ | 25(13) | 7(4) | 5(3) | 0(0) | 0(0) | 13(6) |
| 5 | ಶಿಡ್ಲಘಟ್ಟ | 28(14) | 7(4) | 3(2) | 3(2) | 1(0) | 14(6) |
| 6 | ಗುಡಿಬಂಡೆ | 8(4) | 2(1) | 1(1) | 1(1) | 0(0) | 4(1) |
| | | | **ಶಿವಮೊಗ್ಗ** | | | | |
| 1 | ಶಿವಮೊಗ್ಗ | 42(21) | 8(4) | 2(1) | 9(5) | 2(1) | 21(10) |
| 2 | ಭದ್ರಾವತಿ | 41(21) | 7(4) | 1(1) | 10(5) | 2(1) | 21(10) |
| 3 | ತೀರ್ಥಹಳ್ಳಿ | 38(19) | 2(1) | 0(0) | 10(6) | 3(1) | 23(11) |
| 4 | ಶಿಕಾರಿಪುರ | 44(22) | 9(5) | 2(1) | 9(5) | 2(1) | 22(10) |
| 5 | ಸೊರಬ | 41(21) | 6(3) | 1(1) | 10(6) | 3(1) | 21(10) |
| 6 | ಸಾಗರ | 35(18) | 2(1) | 1(1) | 10(5) | 2(1) | 20(10) |
| 7 | ಹೊಸನಗರ | 30(15) | 1(1) | 0(0) | 8(4) | 2(1) | 19(9) |
| | | | **ತುಮಕೂರು** | | | | |
| 1 | ತುಮಕೂರು | 41(21) | 10(5) | 4(2) | 5(2) | 1(1) | 21(11) |
| 2 | ಗುಬ್ಬಿ | 34(17) | 7(4) | 3(2) | 6(3) | 1(1) | 17(7) |
| 3 | ಕುಣಿಗಲ್ | 36(18) | 4(2) | 0(0) | 10(5) | 2(1) | 20(10) |
| 4 | ತಿಪಟೂರು | 26(13) | 4(2) | 1(1) | 6(3) | 2(1) | 13(6) |
| 5 | ಚಿಕ್ಕನಾಯ್ಕನಹಳ್ಳಿ | 28(14) | 6(3) | 3(2) | 4(2) | 1(1) | 14(6) |

| ಕ್ರ. ಸಂ | ತಾಲ್ಲೂಕು | ಒಟ್ಟು ಗ್ರಾ.ಪಂ/ ಹುದ್ದೆಗಳ ಸಂಖ್ಯೆ | ಅ.ಜಾ | ಅ.ಪಂ | ಹಿಂ. 'ಅ' ವರ್ಗ | ಹಿಂ. 'ಬ' ವರ್ಗ | ಸಾಮಾನ್ಯ |
|---|---|---|---|---|---|---|---|
| **1** | **2** | **3** | **4** | **5** | **6** | **7** | **8** |
| 6 | ತುರುವೇಕೆರೆ | 27(14) | 3(2) | 1(1) | 7(4) | 2(1) | 14(6) |
| 7 | ಮಧುಗಿರಿ | 39(20) | 9(5) | 5(3) | 4(2) | 1(1) | 20(9) |
| 8 | ಕೊರಟಗೆರೆ | 24(12) | 6(3) | 3(2) | 2(2) | 1(0) | 12(5) |
| 9 | ಸಿರಾ | 42(21) | 10(5) | 4(2) | 6(3) | 1(1) | 21(10) |
| 10 | ಪಾವಗಡ | 34(17) | 10(5) | 6(3) | 1(1) | 0(0) | 17(8) |
| | | | | **ಚಿಕ್ಕಮಗಳೂರು** | | | |
| 1 | ಚಿಕ್ಕಮಗಳೂರು | 47(24) | 9(5) | 1(1) | 10(6) | 3(1) | 24(11) |
| 2 | ಕಡೂರು | 60(30) | 8(4) | 1(1) | 16(8) | 4(2) | 31(15) |
| 3 | ತರೀಕೆರೆ | 46(23) | 8(4) | 1(1) | 11(6) | 3(1) | 23(11) |
| 4 | ಮೂಡಿಗೆರೆ | 29(15) | 5(3) | 2(1) | 6(3) | 1(1) | 15(7) |
| 5 | ಕೊಪ್ಪ | 22(11) | 3(2) | 1(1) | 6(3) | 1(1) | 11(4) |
| 6 | ನರಸಿಂಹರಾಜಪುರ | 14(7) | 2(1) | 0(0) | 4(2) | 1(1) | 7(3) |
| 7 | ಶೃಂಗೇರಿ | 9(5) | 1(1) | 0(0) | 2(2) | 1(0) | 5(2) |
| | | | | **ದಕ್ಷಿಣ ಕನ್ನಡ** | | | |
| 1 | ಮಂಗಳೂರು | 55(28) | 4(2) | 1(1) | 14(7) | 4(2) | 32(16) |
| 2 | ಬಂಟ್ವಾಳ | 58(29) | 3(2) | 3(2) | 15(8) | 4(2) | 33(15) |
| 3 | ಪುತ್ತೂರು | 41(21) | 5(3) | 2(1) | 10(6) | 3(1) | 21(10) |
| 4 | ಬೆಳ್ತಂಗಡಿ | 48(24) | 4(2) | 2(1) | 13(6) | 3(2) | 26(13) |
| 5 | ಸುಳ್ಯ | 28(14) | 3(2) | 2(1) | 7(4) | 2(1) | 14(6) |
| | | | | **ಉಡುಪಿ** | | | |
| 1 | ಉಡುಪಿ | 59(30) | 4(2) | 3(2) | 16(8) | 4(2) | 32(16) |
| 2 | ಕುಂದಾಪುರ | 65(33) | 3(2) | 2(1) | 18(9) | 4(2) | 38(19) |
| 3 | ಕಾರ್ಕಳ | 34(17) | 3(2) | 2(1) | 9(5) | 2(1) | 18(8) |
| | | | | **ಹಾಸನ** | | | |
| 1 | ಹಾಸನ | 40(20) | 7(4) | 1(1) | 10(5) | 2(1) | 20(9) |
| 2 | ಅರಸೀಕೆರೆ | 45(23) | 9(5) | 1(1) | 10(5) | 2(1) | 23(11) |
| 3 | ಚನ್ನರಾಯಪಟ್ಟಣ | 41(21) | 4(2) | 0(0) | 11(6) | 3(1) | 23(12) |
| 4 | ಹೊಳೆನರಸೀಪುರ | 26(13) | 5(3) | 1(1) | 6(3) | 1(1) | 13(5) |
| 5 | ಸಕಲೇಶಪುರ | 26(13) | 6(3) | 0(0) | 6(3) | 1(1) | 13(6) |

| ಕ್ರ. ಸಂ | ತಾಲ್ಲೂಕು | ಒಟ್ಟು ಗ್ರಾ.ಪಂ/ ಹುದ್ದೆಗಳ ಸಂಖ್ಯೆ | ಅ.ಜಾ | ಅ.ಪಂ | ಹಿಂ. 'ಅ' ವರ್ಗ | ಹಿಂ. 'ಬ' ವರ್ಗ | ಸಾಮಾನ್ಯ |
|---|---|---|---|---|---|---|---|
| **1** | **2** | **3** | **4** | **5** | **6** | **7** | **8** |
| 6 | ಆಲೂರು | 15(8) | 3(2) | 0(0) | 3(2) | 1(0) | 8(4) |
| 7 | ಬೇಲೂರು | 37(19) | 8(4) | 1(1) | 7(4) | 2(1) | 19(9) |
| 8 | ಅರಕಲಗೂಡು | 36(18) | 6(3) | 0(0) | 10(5) | 2(1) | 18(9) |
| | **ಕೊಡಗು** | | | | | | |
| 1 | ಮಡಿಕೇರಿ | 26(13) | 2(1) | 1(1) | 7(4) | 2(1) | 14(6) |
| 2 | ವಿರಾಜಪೇಟೆ | 38(19) | 3(2) | 6(3) | 8(4) | 2(1) | 19(9) |
| 3 | ಸೋಮವಾರಪೇಟೆ | 40(20) | 5(3) | 2(1) | 10(6) | 3(1) | 20(9) |
| | **ಮಂಡ್ಯ** | | | | | | |
| 1 | ಮಂಡ್ಯ | 46(23) | 6(3) | 0(0) | 12(6) | 3(2) | 25(12) |
| 2 | ಮದ್ದೂರು | 42(21) | 6(3) | 0(0) | 11(6) | 3(1) | 22(11) |
| 3 | ಮಳವಳ್ಳಿ | 39(20) | 8(4) | 0(0) | 9(5) | 2(1) | 20(10) |
| 4 | ಶ್ರೀರಂಗಪಟ್ಟಣ | 21(11) | 4(2) | 0(0) | 5(2) | 1(1) | 11(6) |
| 5 | ನಾಗಮಂಗಲ | 28(14) | 4(2) | 0(0) | 7(4) | 2(1) | 15(7) |
| 6 | ಪಾಂಡವಪುರ | 24(12) | 3(2) | 0(0) | 6(3) | 2(1) | 13(6) |
| 7 | ಕೃಷ್ಣರಾಜಪೇಟೆ | 34(17) | 5(3) | 1(1) | 9(5) | 2(1) | 17(7) |
| | **ಮೈಸೂರು** | | | | | | |
| 1 | ಮೈಸೂರು | 37(19) | 10(5) | 8(4) | 0(0) | 0(0) | 19(10) |
| 2 | ಟಿ.ನರಸೀಪುರ | 36(18) | 11(6) | 5(3) | 2(1) | 0(0) | 18(8) |
| 3 | ನಂಜನಗೂಡು | 45(23) | 12(6) | 8(4) | 2(1) | 0(0) | 23(12) |
| 4 | ಹುಣಸೂರು | 41(21) | 7(4) | 7(4) | 5(2) | 1(1) | 21(10) |
| 5 | ಕೆ.ಆರ್.ನಗರ | 34(17) | 5(3) | 2(1) | 8(4) | 2(1) | 17(8) |
| 6 | ಹೆಚ್.ಡಿ.ಕೋಟೆ | 39(20) | 11(6) | 9(5) | 0(0) | 0(0) | 19(9) |
| 7 | ಪಿರಿಯಾಪಟ್ಟಣ | 34(17) | 6(3) | 3(2) | 6(3) | 2(1) | 17(8) |
| | **ಚಾಮರಾಜನಗರ** | | | | | | |
| 1 | ಚಾಮರಾಜನಗರ | 43(22) | 12(6) | 5(3) | 3(2) | 1(0) | 22(11) |
| 2 | ಕೊಳ್ಳೇಗಾಲ | 41(21) | 13(7) | 5(3) | 2(1) | 0(0) | 21(10) |
| 3 | ಗುಂಡ್ಲುಪೇಟೆ | 34(17) | 6(3) | 4(2) | 6(3) | 1(1) | 17(8) |
| 4 | ಯಳಂದೂರು | 12(6) | 4(2) | 2(1) | 0(0) | 0(0) | 6(3) |
| | **ಬೆಳಗಾವಿ** | | | | | | |
| 1 | ಬೆಳಗಾವಿ | 59(30) | 5(3) | 8(4) | 13(6) | 3(2) | 30(15) |
| 2 | ಬೈಲಹೊಂಗಲ | 50(25) | 3(2) | 5(3) | 14(7) | 3(2) | 25(11) |

| ಕ್ರ ಸಂ | ತಾಲ್ಲೂಕು | ಒಟ್ಟು ಗ್ರಾ.ಪಂ/ ಹುದ್ದೆಗಳ ಸಂಖ್ಯೆ | ಅ.ಜಾ | ಅ.ಪಂ | ಹಿಂ. 'ಅ' ವರ್ಗ | ಹಿಂ. 'ಬ' ವರ್ಗ | ಸಾಮಾನ್ಯ |
|---|---|---|---|---|---|---|---|
| **1** | **2** | **3** | **4** | **5** | **6** | **7** | **8** |
| 3 | ರಾಮದುರ್ಗ | 34(17) | 5(3) | 1(1) | 9(5) | 2(1) | 17(7) |
| 4 | ರಾಯಬಾಗ | 33(17) | 8(4) | 1(1) | 6(3) | 1(1) | 17(8) |
| 5 | ಗೋಕಾಕ | 56(28) | 6(3) | 7(4) | 12(6) | 3(2) | 28(13) |
| 6 | ಖಾನಾಪುರ | 51(26) | 3(2) | 2(1) | 14(7) | 3(2) | 29(14) |
| 7 | ಸವದತ್ತಿ | 45(23) | 5(3) | 6(3) | 9(5) | 2(1) | 23(11) |
| 8 | ಅಥಣಿ | 55(28) | 10(5) | 2(1) | 12(6) | 3(2) | 28(14) |
| 9 | ಹುಕ್ಕೇರಿ | 51(26) | 8(4) | 7(4) | 8(4) | 2(1) | 26(13) |
| 10 | ಚಿಕ್ಕೋಡಿ | 63(32) | 12(6) | 1(1) | 14(7) | 4(2) | 32(16) |
| | **ವಿಜಯಪುರ** | | | | | | |
| 1 | ವಿಜಯಪುರ | 48(24) | 16(8) | 1(1) | 6(3) | 1(1) | 24(11) |
| 2 | ಬ.ಬಾಗೇವಾಡಿ | 38(19) | 9(5) | 1(1) | 7(4) | 2(1) | 19(8) |
| 3 | ಮುದ್ದೇಬಿಹಾಳ | 33(17) | 8(4) | 1(1) | 6(3) | 1(1) | 17(8) |
| 4 | ಇಂಡಿ | 51(26) | 11(6) | 1(1) | 10(6) | 3(1) | 26(12) |
| 5 | ಸಿಂಧಗಿ | 43(22) | 10(5) | 1(1) | 8(4) | 2(1) | 22(11) |
| | **ಬಾಗಲಕೋಟೆ** | | | | | | |
| 1 | ಬಾಗಲಕೋಟೆ | 30(15) | 6(3) | 2(1) | 6(3) | 1(1) | 15(7) |
| 2 | ಬದಾಮಿ | 42(21) | 6(3) | 4(2) | 9(5) | 2(1) | 21(10) |
| 3 | ಹುನಗುಂದ | 35(18) | 7(4) | 1(1) | 7(4) | 2(1) | 18(8) |
| 4 | ಜಮಖಂಡಿ | 38(19) | 8(4) | 1(1) | 8(4) | 2(1) | 19(9) |
| 5 | ಮುಧೋಳ | 29(15) | 7(4) | 6(3) | 1(1) | 0(0) | 15(7) |
| 6 | ಬೀಳಗಿ | 24(12) | 4(2) | 3(2) | 4(2) | 1(1) | 12(5) |
| | **ಧಾರವಾಡ** | | | | | | |
| 1 | ಧಾರವಾಡ | 39(20) | 3(2) | 3(2) | 10(6) | 3(1) | 20(9) |
| 2 | ಕುಂದಗೋಳ | 25(13) | 2(1) | 2(1) | 6(3) | 2(1) | 13(7) |
| 3 | ನವಲಗುಂದ | 25(13) | 2(1) | 1(1) | 6(3) | 2(1) | 14(7) |
| 4 | ಕಲಘಟಗಿ | 28(14) | 3(2) | 1(1) | 7(4) | 2(1) | 15(6) |
| 5 | ಹುಬ್ಬಳ್ಳಿ | 26(13) | 2(1) | 1(1) | 7(4) | 2(1) | 14(6) |
| | **ಗದಗ** | | | | | | |
| 1 | ಗದಗ | 27(14) | 5(3) | 2(1) | 5(2) | 1(1) | 14(7) |
| 2 | ಶಿರಹಟ್ಟಿ | 27(14) | 6(3) | 2(1) | 4(2) | 1(1) | 14(7) |
| 3 | ಮುಂಡರಗಿ | 18(9) | 4(2) | 1(1) | 3(2) | 1(0) | 9(4) |

| ಕ್ರ. ಸಂ | ತಾಲ್ಲೂಕು | ಒಟ್ಟು ಗ್ರಾ.ಪಂ/ ಹುದ್ದೆಗಳ ಸಂಖ್ಯೆ | ಅ.ಜಾ | ಅ.ಪಂ | ಹಿಂ. 'ಅ' ವರ್ಗ | ಹಿಂ. 'ಬ' ವರ್ಗ | ಸಾಮಾನ್ಯ |
|---|---|---|---|---|---|---|---|
| **1** | **2** | **3** | **4** | **5** | **6** | **7** | **8** |
| 4 | ರೋಣ | 35(18) | 5(3) | 2(1) | 8(4) | 2(1) | 18(9) |
| 5 | ನರಗುಂದ | 13(7) | 1(1) | 1(1) | 3(2) | 1(0) | 7(3) |
| | | | **ಹಾವೇರಿ** | | | | |
| 1 | ಹಾವೇರಿ | 33(17) | 4(2) | 3(2) | 7(4) | 2(1) | 17(8) |
| 2 | ಬ್ಯಾಡಗಿ | 21(11) | 2(1) | 3(2) | 4(2) | 1(1) | 11(5) |
| 3 | ರಾಣೆಬೆನ್ನೂರ | 39(20) | 6(3) | 4(2) | 7(4) | 2(1) | 20(10) |
| 4 | ಹಿರೇಕೆರೂರ | 38(19) | 5(3) | 4(2) | 8(4) | 2(1) | 19(9) |
| 5 | ಸವಣೂರ | 21(11) | 3(2) | 2(1) | 4(2) | 1(1) | 11(5) |
| 6 | ಶಿಗ್ಗಾಂವ | 28(14) | 3(2) | 2(1) | 7(4) | 2(1) | 14(6) |
| 7 | ಹಾನಗಲ್ಲ | 42(21) | 6(3) | 3(2) | 10(5) | 2(1) | 21(10) |
| | | | **ಕಾರವಾರ** | | | | |
| 1 | ಕಾರವಾರ | 18(9) | 1(1) | 0(0) | 5(2) | 1(1) | 11(5) |
| 2 | ಅಂಕೋಲ | 21(11) | 1(1) | 0(0) | 6(3) | 1(1) | 13(6) |
| 3 | ಕುಮಟಾ | 22(11) | 1(1) | 0(0) | 6(3) | 1(1) | 14(6) |
| 4 | ಹೊನ್ನಾವರ | 28(14) | 1(1) | 0(0) | 7(4) | 2(1) | 18(8) |
| 5 | ಭಟ್ಕಳ | 16(8) | 2(1) | 1(1) | 4(2) | 1(1) | 8(3) |
| 6 | ಶಿರಸಿ | 32(16) | 2(1) | 0(0) | 9(5) | 2(1) | 19(9) |
| 7 | ಸಿದ್ದಾಪುರ | 23(12) | 1(1) | 0(0) | 6(3) | 2(1) | 14(7) |
| 8 | ಯಲ್ಲಾಪುರ | 15(8) | 0(0) | 1(1) | 4(2) | 1(1) | 9(4) |
| 9 | ಮುಂಡಗೋಡ | 16(8) | 2(1) | 1(1) | 4(2) | 1(1) | 8(3) |
| 10 | ಹಳಿಯಾಳ | 24(12) | 1(1) | 1(1) | 6(3) | 2(1) | 14(6) |
| 11 | ಜೋಯಿಡಾ | 15(8) | 1(1) | 0(0) | 4(2) | 1(1) | 9(4) |
| | | | **ಬೀದರ್** | | | | |
| 1 | ಬೀದರ್ | 35(18) | 9(5) | 7(4) | 1(1) | 0(0) | 18(8) |
| 2 | ಬಸವಕಲ್ಯಾಣ | 38(19) | 11(6) | 9(5) | 0(0) | 0(0) | 18(8) |
| 3 | ಭಾಲ್ಕಿ | 40(20) | 10(5) | 4(2) | 5(2) | 1(1) | 20(10) |
| 4 | ಔರಾದ | 39(20) | 13(7) | 5(3) | 1(1) | 0(0) | 20(9) |
| 5 | ಹುಮ್ನಾಬಾದ್ | 34(17) | 11(6) | 8(4) | 0(0) | 0(0) | 15(7) |
| | | | | | | | |

| ಕ್ರ.ಸಂ | ತಾಲ್ಲೂಕು | ಒಟ್ಟು ಗ್ರಾ.ಪಂ/ ಹುದ್ದೆಗಳ ಸಂಖ್ಯೆ | ಅ.ಜಾ | ಅ.ಪಂ | ಹಿಂ. 'ಅ' ವರ್ಗ | ಹಿಂ. 'ಬ' ವರ್ಗ | ಸಾಮಾನ್ಯ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| | | | | ಬಳ್ಳಾರಿ | | | |
| 1 | ಬಳ್ಳಾರಿ | 39(20) | 10(5) | 13(7) | 0(0) | 0(0) | 16(8) |
| 2 | ಸಿರಗುಪ್ಪ | 27(14) | 7(4) | 6(3) | 0(0) | 0(0) | 14(7) |
| 3 | ಹೊಸಪೇಟೆ | 22(11) | 8(4) | 5(3) | 0(0) | 0(0) | 9(4) |
| 4 | ಹಗರಿಬೊಮ್ಮನಹಳ್ಳಿ | 23(12) | 6(3) | 3(2) | 2(1) | 0(0) | 12(6) |
| 5 | ಹಡಗಲಿ | 26(13) | 8(4) | 2(1) | 2(2) | 1(0) | 13(6) |
| 6 | ಸಂಡೂರು | 26(13) | 6(3) | 9(5) | 0(0) | 0(0) | 11(5) |
| 7 | ಕೂಡ್ಲಿಗಿ | 36(18) | 10(5) | 12(6) | 0(0) | 0(0) | 14(7) |
| | | | | ರಾಯಚೂರು | | | |
| 1 | ರಾಯಚೂರು | 34(17) | 9(5) | 9(5) | 0(0) | 0(0) | 16(7) |
| 2 | ಮಾನ್ವಿ | 38(19) | 10(5) | 13(7) | 0(0) | 0(0) | 15(7) |
| 3 | ದೇವದುರ್ಗ | 33(17) | 9(5) | 14(7) | 0(0) | 0(0) | 10(5) |
| 4 | ಲಿಂಗಸುಗೂರು | 39(20) | 11(6) | 10(5) | 0(0) | 0(0) | 18(9) |
| 5 | ಸಿಂಧನೂರು | 36(18) | 9(5) | 7(4) | 2(1) | 0(0) | 18(8) |
| | | | | ಕಲಬುರಗಿ | | | |
| 1 | ಕಲಬುರಗಿ | 41(21) | 15(8) | 1(1) | 3(2) | 1(0) | 21(10) |
| 2 | ಅಳಂದ | 47(24) | 13(7) | 1(1) | 7(4) | 2(1) | 24(11) |
| 3 | ಅಫಜಲಪುರ | 28(14) | 6(3) | 0(0) | 6(3) | 2(1) | 14(7) |
| 4 | ಸೇಡಂ | 27(14) | 1(1) | 1(1) | 7(4) | 2(1) | 16(7) |
| 5 | ಚಿಂಚೋಳಿ | 36(18) | 14(7) | 1(1) | 2(2) | 1(0) | 18(8) |
| 6 | ಚಿತ್ತಾಪುರ | 43(22) | 14(7) | 1(1) | 5(2) | 1(1) | 22(11) |
| 7 | ಜೇವರ್ಗಿ | 42(21) | 9(5) | 3(2) | 7(4) | 2(1) | 21(9) |
| | | | | ಯಾದಗಿರಿ | | | |
| 1 | ಯಾದಗಿರಿ | 40(20) | 14(7) | 4(2) | 2(1) | 0(0) | 20(10) |
| 2 | ಶಹಾಪುರ | 41(21) | 13(7) | 5(3) | 2(1) | 0(0) | 21(10) |
| 3 | ಶೋರಾಪುರ | 42(21) | 11(6) | 10(5) | 0(0) | 0(0) | 21(10) |
| | | | | ಕೊಪ್ಪಳ | | | |
| 1 | ಕೊಪ್ಪಳ | 38(19) | 10(5) | 5(3) | 3(2) | 1(0) | 19(9) |
| 2 | ಗಂಗಾವತಿ | 42(21) | 10(5) | 9(5) | 2(1) | 0(0) | 21(10) |

| ಕ್ರ. ಸಂ | ತಾಲ್ಲೂಕು | ಒಟ್ಟು ಗ್ರಾ.ಪಂ/ ಹುದ್ದೆಗಳ ಸಂಖ್ಯೆ | ಅ.ಜಾ | ಅ.ಪಂ | ಹಿಂ. 'ಅ' ವರ್ಗ | ಹಿಂ. 'ಬ' ವರ್ಗ | ಸಾಮಾನ್ಯ |
|---|---|---|---|---|---|---|---|
| **1** | **2** | **3** | **4** | **5** | **6** | **7** | **8** |
| 3 | ಕುಷ್ಟಗಿ | 36(18) | 6(3) | 6(3) | 5(2) | 1(1) | 18(9) |
| 4 | ಯಲಬುರ್ಗ | 36(18) | 7(4) | 5(3) | 5(2) | 1(1) | 18(8) |

(ಆವರಣದಲ್ಲಿ ಸೂಚಿಸಿರುವ ಸಂಖ್ಯೆಯು ಮಹಿಳೆಯರಿಗೆ ಮೀಸಲಿರಿಸಿದ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಹುದ್ದೆಯನ್ನು ಸೂಚಿಸುತ್ತದೆ)

**ಆರ್. ಚಂದ್ರಶೇಖರ್**
ಅಧೀನ ಕಾರ್ಯದರ್ಶಿ
ರಾಜ್ಯ ಚುನಾವಣಾ ಆಯೋಗ

**ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು.** (ಪಿಠ) (೫೦೦ ಪ್ರತಿಗಳು)

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ರಾಜ್ಯ ಪತ್ರಿಕೆ

| ಭಾಗ– I | ಬೆಂಗಳೂರು, ಸೋಮವಾರ, ಜೂನ್ ೦೧, ೨೦೧೫ (ಜ್ಯೇಷ್ಠ ೧೧, ಶಕ ವರ್ಷ ೧೯೩೭) | ನಂ. ೬೩೧ |
|---|---|---|
| *Part– I* | *Bengaluru, Monday, June 01, 2015 (Jyeishta 11, Shaka Varsha 1937)* | *No. 631* |

**ಕರ್ನಾಟಕ ಸರ್ಕಾರದ ನಡವಳಿಗಳು**

**ಶಿಕ್ಷಣ ಸಚಿವಾಲಯ**

**ವಿಷಯ:** 2015–16ನೇ ಸಾಲಿಗೆ ಸರ್ಕಾರಿ / ವಿಶ್ವವಿದ್ಯಾಲಯ / ಖಾಸಗಿ ಅನುದಾನಿತ /ಖಾಸಗಿ ಅನುದಾನರಹಿತ ಇಂಜಿನಿಯರಿಂಗ್ / ಆರ್ಕಿಟೆಕ್ಚರ್ ಕಾಲೇಜುಗಳಲ್ಲಿ ಪ್ರವೇಶಾತಿಗೆ ಸಂಬಂಧಿಸಿದಂತೆ ಸೀಟು ಹಂಚಿಕೆ ಮತ್ತು ಶುಲ್ಕ ನಿಗದಿ ಬಗ್ಗೆ ಆದೇಶ

**ಪ್ರಸ್ತಾವನೆ:**

ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳ (ಪ್ರವೇಶ ನಿಯಂತ್ರಣ ಮತ್ತು ಶುಲ್ಕ ನಿಗದಿ) (ವಿಶೇಷ ಉಪಬಂಧಗಳು) ಅಧಿನಿಯಮ, 2013 (Act No.50 of 2013) ದಿನಾಂಕ: 24–06–2013ರಿಂದ ಜಾರಿಗೆ ಬಂದಿದ್ದು, ಅದರಂತೆ 2015–16ನೇ ಸಾಲಿಗೆ ಇಂಜಿನಿಯರಿಂಗ್ / ಆರ್ಕಿಟೆಕ್ಚರ್ ಕಾಲೇಜುಗಳಲ್ಲಿ ಪ್ರವೇಶಾತಿಗೆ ಸಂಬಂಧಿಸಿದಂತೆ ಸೀಟು ಹಂಚಿಕೆ ಮತ್ತು ಶುಲ್ಕ ನಿಗದಿ ಕುರಿತಂತೆ ಕರ್ನಾಟಕ ಸರ್ಕಾರ ಮತ್ತು ಖಾಸಗಿ ವೃತ್ತಿಪರ ಶಿಕ್ಷಣ ಸಂಸ್ಥೆಗಳ ಪ್ರತಿನಿಧಿಗಳೊಂದಿಗೆ ಆದ ಸಮ್ಮತಾಭಿಪ್ರಾಯದ ಕರಾರು ಒಪ್ಪಂದದಂತೆ ಕರ್ನಾಟಕ ರಾಜ್ಯದಲ್ಲಿರುವ ವಿಶ್ವವಿದ್ಯಾಲಯ / ಸರ್ಕಾರಿ / ಖಾಸಗಿ ಅನುದಾನಿತ / ಖಾಸಗಿ ಅನುದಾನರಹಿತ ಇಂಜಿನಿಯರಿಂಗ್ / ಆರ್ಕಿಟೆಕ್ಚರ್ ಕಾಲೇಜುಗಳಲ್ಲಿ ಕರ್ನಾಟಕ ಪರೀಕ್ಷಾ ಪ್ರಾಧಿಕಾರದಿಂದ ಪ್ರವೇಶಾತಿ ಪಡೆಯುವ ವಿದ್ಯಾರ್ಥಿಗಳಿಗೆ ಎರಡು ಹಂತದ ಅಂದರೆ ರೂ.45,000/– ಮತ್ತು ರೂ.50,000/–(ವಿಶ್ವವಿದ್ಯಾಲಯ ಶುಲ್ಕ ಒಳಗೊಂಡಂತೆ) ಶುಲ್ಕದಂತೆ ನಿಗದಿಪಡಿಸಬಹುದೆಂದು ತೀರ್ಮಾನಿಸಲಾಗಿದೆ.

ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 106 ಟಿಇಸಿ 2015**

**ಬೆಂಗಳೂರು, ದಿನಾಂಕ:1ನೇ ಜೂನ್ 2015.**

2015–16ನೇ ಸಾಲಿಗೆ ಇಂಜಿನಿಯರಿಂಗ್/ ಆರ್ಕಿಟೆಕ್ಚರ್ ಕಾಲೇಜುಗಳಲ್ಲಿ ಪ್ರವೇಶಾತಿಗೆ ಸಂಬಂಧಿಸಿದಂತೆ ಕರ್ನಾಟಕ ರಾಜ್ಯದಲ್ಲಿರುವ ಸರ್ಕಾರಿ/ ವಿಶ್ವವಿದ್ಯಾಲಯ/ಖಾಸಗಿ ಅನುದಾನಿತ/ಖಾಸಗಿ ಅನುದಾನರಹಿತ ಇಂಜಿನಿಯರಿಂಗ್/ಆರ್ಕಿಟೆಕ್ಚರ್ ಕಾಲೇಜುಗಳಲ್ಲಿನ ಸರ್ಕಾರಿ ಸೀಟು ಹಂಚಿಕೆ ಮತ್ತು ಶುಲ್ಕ ನಿಗದಿಯು ಈ ಕೆಳಕಂಡ ನಿಬಂಧನೆಗೆ ಒಳಪಟ್ಟು ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಂತೆ ಇರುತ್ತದೆ. 2015–16ನೇ ಸಾಲಿನಲ್ಲಿ ಪ್ರಥಮ ವರ್ಷದ ಬಿ.ಇ.ಗೆ ಪ್ರವೇಶಾತಿ ಪಡೆಯುವ ವಿದ್ಯಾರ್ಥಿಗಳು ನಾಲ್ಕು ವರ್ಷದ ಬಿ.ಇ. ಪದವಿ ಕೋರ್ಸು ಪೂರ್ಣಗೊಳ್ಳುವವರೆಗೂ ಇದೇ ಶುಲ್ಕವನ್ನು ಮಾತ್ರ ಪಾವತಿಸತಕ್ಕದ್ದು.

**ನಿಬಂಧನೆಗಳು:**

1. ಎಲ್ಲಾ ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಅನುದಾನರಹಿತ (ಅಲ್ಪಸಂಖ್ಯಾತ ಹಾಗೂ ಅಲ್ಪಸಂಖ್ಯಾತವಲ್ಲದ) ಇಂಜಿನಿಯರಿಂಗ್ ಕಾಲೇಜುಗಳಲ್ಲಿ ಎಐಸಿಟಿಇಯು ನಿಗದಿಪಡಿಸಬಹುದಾದ ಪ್ರತಿ ಕೋರ್ಸುಗಳ ಒಟ್ಟು ಪ್ರವೇಶ ಮಿತಿಯ ಮೇಲೆ ಶೇ. 5ರಷ್ಟು ಸಂಖ್ಯಾಧಿಕ ಸೀಟುಗಳನ್ನು (supernumerary seats) ಬೋಧನಾ ಶುಲ್ಕವಿಲ್ಲದೆ (tuition fee

waiver schemes) ಪ್ರತಿಭಾನ್ವಿತ ಬಡ ವಿದ್ಯಾರ್ಥಿಗಳ ಪೋಷಕರ ವಾರ್ಷಿಕ ಆದಾಯ ರೂ.6.00 ಲಕ್ಷದ ಮಿತಿಯೊಳಗಿರುವ ಫಲಾನುಭವಿಗಳಿಗೆ ಮೆರಿಟ್ ಆಧಾರದ ಮೇಲೆ ಸೀಟನ್ನು ಹಂಚಿಕೆ ಮಾಡಲಾಗುವುದು.

(ಅ) ರಾಜ್ಯ ಸರ್ಕಾರವು ನಿಗದಿಪಡಿಸಿರುವ ಬೋಧನಾ ಶುಲ್ಕವನ್ನು ಈ ಫಲಾನುಭವಿಯು ಭರಿಸತಕ್ಕದ್ದಲ್ಲ. ಆದರೆ ಈ ಅಭ್ಯರ್ಥಿಯು ವಿಶ್ವವಿದ್ಯಾಲಯ ಶುಲ್ಕವನ್ನು ಮಾತ್ರ ಕರ್ನಾಟಕ ಪರೀಕ್ಷಾ ಪ್ರಾಧಿಕಾರಕ್ಕೆ ಪಾವತಿಸತಕ್ಕದ್ದು.

(ಆ) ಎಐಸಿಟಿಇಯ ಈ ಯೋಜನೆಯು ಎಲ್ಲಾ ಶಿಕ್ಷಣ ಸಂಸ್ಥೆಗಳಲ್ಲಿನ ಪ್ರತಿ ಕೋರ್ಸುಗಳಲ್ಲೂ ಶೇ.5ರಷ್ಟನ್ನು ಸಂಖ್ಯಾಧಿಕವಾಗಿ ಹಂಚಿಕೆಯನ್ನು ಕರ್ನಾಟಕ ಪರೀಕ್ಷಾ ಪ್ರಾಧಿಕಾರದ ಸಾಮಾನ್ಯ ಪ್ರವೇಶ ಪರೀಕ್ಷೆಯಲ್ಲಿ ಅರ್ಹರಾದವರಿಂದ ಮಾತ್ರ ಭರ್ತಿ ಮಾಡತಕ್ಕದ್ದು.

(ಇ) ಈ ಸೀಟುಗಳನ್ನು ಅರ್ಹ ಅಭ್ಯರ್ಥಿಗಳಿಗೆ ಅವರು ಸಾಮಾನ್ಯ ಪ್ರವೇಶ ಪರೀಕ್ಷೆಯಲ್ಲಿ ಪಡೆದ ರ್‍ಯಾಂಕ್ ಆಧಾರದ ಮೇಲೆ ಹಂಚಿಕೆ ಮಾಡಲು ಕರ್ನಾಟಕ ಪರೀಕ್ಷಾ ಪ್ರಾಧಿಕಾರಕ್ಕೆ ಸರ್ಕಾರವು ಅಧಿಕಾರವನ್ನು ನೀಡಲಾಗಿದೆ.

(ಈ) ಸಂಖ್ಯಾಧಿಕ ಸೀಟುಗಳಿಗೆ (supernumerary seats) ವಿದ್ಯಾರ್ಥಿಗಳ ಲಭ್ಯತೆ ಇಲ್ಲದಿದ್ದಲ್ಲಿ ಅದನ್ನು ಕಾಮೆಡ್-ಕೆ ಅಥವಾ ಆಡಳಿತ ಮಂಡಳಿ ಕೋಟಾ ಸೀಟುಗಳಾಗಿ ಪರಿವರ್ತಿಸತಕ್ಕದ್ದಲ್ಲ ಹಾಗೂ ಈ ಪ್ರವೇಶಾತಿಗಳಿಗೆ 2ನೇ ವರ್ಷದ ಲ್ಯಾಟರಲ್ ಎಂಟ್ರಿಗೂ ಪರಿಗಣಿಸತಕ್ಕದ್ದಲ್ಲ.

(ಉ) ಈ ವರ್ಗದಡಿ ಪ್ರವೇಶ ಪಡೆದ ವಿದ್ಯಾರ್ಥಿಗಳ ಪಟ್ಟಿಯನ್ನು ಸಂಬಂಧಪಟ್ಟ ಶಿಕ್ಷಣ ಸಂಸ್ಥೆಗಳಿಗೆ ಮತ್ತು ತಾಂತ್ರಿಕ ಶಿಕ್ಷಣ ನಿರ್ದೇಶಕರಿಗೆ ವಿವರವನ್ನು ಕರ್ನಾಟಕ ಪರೀಕ್ಷಾ ಪ್ರಾಧಿಕಾರವು ನೀಡತಕ್ಕದ್ದು.

(ಊ) ಈ ವರ್ಗದಡಿ ಪ್ರವೇಶಾತಿ ಪಡೆದ ವಿದ್ಯಾರ್ಥಿಗಳು ಯಾವುದೇ ಕಾರಣದಿಂದ ಶಿಕ್ಷಣ ಸಂಸ್ಥೆಗಳು / ಕೋರ್ಸುಗಳ ಬದಲಾವಣೆಗೆ ಅವಕಾಶ ಇರತಕ್ಕದ್ದಲ್ಲ.

(ಋ) ಈ ವರ್ಗದಡಿ ಪ್ರವೇಶ ಪಡೆದ ವಿದ್ಯಾರ್ಥಿಗಳ ಮಾಹಿತಿಯನ್ನು ಶಿಕ್ಷಣ ಸಂಸ್ಥೆಗಳ ಅಂತರಜಾಲದಲ್ಲಿ ಪ್ರಕಟಿಸತಕ್ಕದ್ದು.

2. ಖಾಸಗಿ ಅನುದಾನಿತ ಕಾಲೇಜುಗಳಲ್ಲಿ ಅನುದಾನರಹಿತ ಕೋರ್ಸುಗಳು / ಅನುದಾನರಹಿತ ಇಂಜಿನಿಯರಿಂಗ್ ಕಾಲೇಜುಗಳಲ್ಲಿ ಒಟ್ಟು ಶುಲ್ಕ ರೂ.45,000/- ಅಥವಾ ರೂ.50,000/- ಗಳಲ್ಲಿ (ವಿಶ್ವವಿದ್ಯಾಲಯ ಶುಲ್ಕ ಹಾಗೂ ಇತರೆ ಶುಲ್ಕವೂ ಸೇರಿದಂತೆ) ಪ್ರವೇಶಾತಿ ಪಡೆದ ವಿದ್ಯಾರ್ಥಿಗಳಿಗೆ ಯಾವುದೇ ಸಹಾಯಧನವನ್ನು ಸರ್ಕಾರದಿಂದ ನೀಡಲಾಗುವುದಿಲ್ಲ.
3. ಸರ್ಕಾರಿ ಇಂಜಿನಿಯರಿಂಗ್ ಕಾಲೇಜುಗಳು ಮತ್ತು ವಿಶ್ವವಿದ್ಯಾಲಯದ ಘಟಕ ಕಾಲೇಜುಗಳಲ್ಲಿ ಪ್ರವೇಶಾತಿ ಪಡೆಯುವ ವಿದ್ಯಾರ್ಥಿಗಳು ರೂ.15,000/-ಶುಲ್ಕ ಹಾಗೂ ವಿಶ್ವವಿದ್ಯಾಲಯ ಶುಲ್ಕವನ್ನು ಪಾವತಿಸತಕ್ಕದ್ದು.
4. ಖಾಸಗಿ ಅನುದಾನಿತ ಕಾಲೇಜುಗಳಲ್ಲಿ ಅನುದಾನಿತ ಕೋರ್ಸುಗಳಲ್ಲಿ ಪ್ರವೇಶಾತಿ ಪಡೆಯುವ ವಿದ್ಯಾರ್ಥಿಗಳು ರೂ.15,000/- ಶುಲ್ಕ ಹಾಗೂ ವಿಶ್ವವಿದ್ಯಾಲಯ ಶುಲ್ಕವನ್ನು ಪಾವತಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ನಾಗಭೂಷಣ್**

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ (ತಾಂತ್ರಿಕ ಶಿಕ್ಷಣ).

## ಅನುಬಂಧ

## ಸರ್ಕಾರಿ ಆದೇಶ ಸಂಖ್ಯೆ: ಇಡಿ 106 ಟಿಇಸಿ 2015, ಬೆಂಗಳೂರು, ದಿನಾಂಕ: 1ನೇ ಜೂನ್ 2015

## ಸರ್ಕಾರಿ, ವಿಶ್ವವಿದ್ಯಾಲಯ ಮತ್ತು ಖಾಸಗಿ / ಅನುದಾನಿತ / ಅನುದಾನರಹಿತ ಇಂಜಿನಿಯರಿಂಗ್ ಕಾಲೇಜುಗಳು

**(ಸೀಟು ಹಂಚಿಕೆ ಮತ್ತು ಶುಲ್ಕ ನಿಗದಿ)**

| | ಸರ್ಕಾರಿ ಕಾಲೇಜುಗಳು ಮತ್ತು ವಿಶ್ವವಿದ್ಯಾಲಯದ ಘಟಕ ಕಾಲೇಜುಗಳು (ಶೇ.100 ಸರ್ಕಾರಿ ಸೀಟುಗಳು) ಶುಲ್ಕ (ರೂ.ಗಳಲ್ಲಿ – ವಿ.ವಿ ಶುಲ್ಕ ಸೇರಿ) | ಖಾಸಗಿ ಅನುದಾನಿತ ಕಾಲೇಜುಗಳು (ಶೇ.95 ಸರ್ಕಾರಿ ಸೀಟುಗಳು) ಶುಲ್ಕ (ರೂ.ಗಳಲ್ಲಿ–ವಿ.ವಿ ಹಾಗೂ ಇತರೆ ಶುಲ್ಕ ಸೇರಿ) | | ಖಾಸಗಿ ಅನುದಾನರಹಿತ ಇಂಜಿನಿಯರಿಂಗ್ / ಟೆಕ್ನಾಲಜಿ/ಆರ್ಕಿಟೆಕ್ಚರ್ ಕಾಲೇಜುಗಳಲ್ಲಿನ ಸೀಟುಗಳು ಹಾಗೂ ಶುಲ್ಕ (ಅಲ್ಪಸಂಖ್ಯಾತವಲ್ಲದ ಸಂಸ್ಥೆಗಳು) | | | ಖಾಸಗಿ ಅನುದಾನರಹಿತ ಇಂಜಿನಿಯರಿಂಗ್ / ಟೆಕ್ನಾಲಜಿ/ಆರ್ಕಿಟೆಕ್ಚರ್ ಕಾಲೇಜುಗಳಲ್ಲಿನ ಸೀಟುಗಳು ಹಾಗೂ ಶುಲ್ಕ (ಅಲ್ಪಸಂಖ್ಯಾತ ಸಂಸ್ಥೆಗಳು) (ವಿಶ್ವವಿದ್ಯಾಲಯ ಶುಲ್ಕ ಹಾಗೂ ಇತರೆ ಶುಲ್ಕ) | | | |
|---|---|---|---|---|---|---|---|---|---|---|
| | | ಶೇಕಡ 95 ಸರ್ಕಾರಿ ಸೀಟುಗಳು (ಕರ್ನಾಟಕ ಪರೀಕ್ಷೆ ಪ್ರಾಧಿಕಾರದ ಮೂಲಕ) | ಶೇಕಡ 5 ಆಡಳಿತ ಮಂಡಳಿ ಸೀಟುಗಳು | ಸರ್ಕಾರಿ ಕೋಟಾ | ಕಾಮೆಡ್–ಕೆ ಕೋಟಾ | ಆಡಳಿತ ಮಂಡಳಿ | ಸರ್ಕಾರ ಕೋಟಾ | | ಕಾಮೆಡ್–ಕೆ ಕೋಟಾ | ಆಡಳಿತ ಮಂಡಳಿ ಕೋಟಾ |
| | | | | 45% ಸೀಟುಗಳು | 30% ಸೀಟುಗಳು | 25% ಸೀಟುಗಳು (15+10) | 40% ಸೀಟುಗಳು | 5% ಸಂಖ್ಯಾಧಿಕ ಸೀಟುಗಳು **(supernumerary seats)** | 30% ಸೀಟುಗಳು | 30% ಸೀಟುಗಳು (20+10) |
| ಇಂಜಿನಿಯರಿಂಗ್ / ಆರ್ಕಿಟೆಕ್ಚರ್ | ರೂ.18,090 | ರೂ.18,090 | ರೂ.1,10,000 ಅಥವಾ 1,50,000 ಗಳ ಮಿತಿಗೆ ಒಳಪಟ್ಟು. | ರೂ. 45,000 ಅಥವಾ 50,000 | ರೂ.1,10,000 ಅಥವಾ 1,50,000 ಗಳ ಮಿತಿಗೊಳಪಟ್ಟು ಶುಲ್ಕ | --- | ರೂ.45,000 ಅಥವಾ 50,000 | ವಿಶ್ವವಿದ್ಯಾಲಯದ ಶುಲ್ಕಗಳು ಮಾತ್ರ | ರೂ.1,10,000 ಅಥವಾ 1,50,000 ಗಳ ಮಿತಿಗೊಳಪಟ್ಟು ಶುಲ್ಕ | --- |

**ಬಿ. ನಾಗಭೂಷಣ್**
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ತಾಂತ್ರಿಕ ಶಿಕ್ಷಣ)

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿಡಿ) (೧೦೦ ಪ್ರತಿಗಳು)

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| ಭಾಗ- I | ಬೆಂಗಳೂರು, ಸೋಮವಾರ, ಜೂನ್ ೦೧, ೨೦೧೫ (ಜ್ಯೇಷ್ಠ ೧೧, ಶಕ ವರ್ಷ ೧೯೩೭) | ನಂ. ೬೩೨ |
|---|---|---|
| Part- I | Bengaluru, Monday, June 01, 2015 (Jyeishta 11, Shaka Varsha 1937) | No. 632 |

ಕರ್ನಾಟಕ ಸರ್ಕಾರದ ನಡವಳಿಗಳು

**ಶಿಕ್ಷಣ ಸಚಿವಾಲಯ**

**ವಿಷಯ:** 2015-16ನೇ ಶೈಕ್ಷಣಿಕ ಸಾಲಿನಲ್ಲಿ ಸ್ನಾತಕೋತ್ತರ ಪದವಿಗಳಾದ ಎಂ.ಬಿ.ಎ/ ಎಂ.ಸಿ.ಎ/ಎಂ.ಇ/ಎಂ.ಟೆಕ್ ಕೋರ್ಸುಗಳಿಗೆ ಸೀಟುಹಂಚಿಕೆ, ಶುಲ್ಕನಿಗದಿ ಮತ್ತು ಪ್ರವೇಶ ಪರೀಕ್ಷೆ ಪ್ರಕ್ರಿಯೆಯನ್ನು ಕರ್ನಾಟಕ ಪರೀಕ್ಷಾ ಪ್ರಾಧಿಕಾರಕ್ಕೆ ವಹಿಸುವ ಬಗ್ಗೆ.

**ಓದಲಾಗಿದೆ :** 01. ಸರ್ಕಾರದ ಆದೇಶಸಂಖ್ಯೆ: ಇಡಿ 177 ಟಿಇಸಿ 2012, ದಿನಾಂಕ: 02.08.2013.
02. ಸರ್ಕಾರದ ಆದೇಶಸಂಖ್ಯೆ: ಇಡಿ 36 ಟಿಇಸಿ 2014, ದಿನಾಂಕ: 23.05.2014.
03. ಸರ್ಕಾರದ ಆದೇಶಸಂಖ್ಯೆ: ಇಡಿ 67 ಟಿಇಸಿ 2015, ದಿನಾಂಕ: 30.04.2015.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಸ್ನಾತಕೋತ್ತರ ಪದವಿಗಳಾದ ಎಂ.ಇ/ಎಂ.ಟೆಕ್ ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಾತಿ ಪ್ರಕ್ರಿಯೆಯಲ್ಲಿ ಅನುಸರಿಸಬೇಕಾದ ವಿಧಿವಿಧಾನಗಳ ಕುರಿತು ಮಾರ್ಗಸೂಚಿಗಳನ್ನು ತಿಳಿಸಲಾಗಿರುತ್ತದೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ 2014-15ನೇ ಶೈಕ್ಷಣಿಕ ಸಾಲಿನಲ್ಲಿ ಸ್ನಾತಕೋತ್ತರ ಪದವಿ ಕೋರ್ಸುಗಳ ವಿದ್ಯಾರ್ಥಿಗಳ ಪ್ರವೇಶ ಪ್ರಕ್ರಿಯೆಯನ್ನು ಅದೇ ವಿಧಾನವನ್ನು ಅನುಸರಿಸಿ ಮುಂದುವರೆಸುವಂತೆ ಆದೇಶಿಸಲಾಗಿರುತ್ತದೆ. 2015-16ನೇ ಶೈಕ್ಷಣಿಕ ಸಾಲಿನಲ್ಲಿಯೂ ಸ್ನಾತಕೋತ್ತರ ಪದವಿಗಳಾದ ಎಂ.ಇ/ಎಂ.ಟೆಕ್ ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶ ಪ್ರಕ್ರಿಯೆಗಳಿಗೆ ಈ ಹಿಂದಿನ ವರ್ಷಗಳಲ್ಲಿ ಅನುಸರಿಸಲಾದ ವಿಧಿವಿಧಾನಗಳನ್ನೇ ಮುಂದುವರೆಸುವುದು ಅವಶ್ಯಕವಾಗಿರುವುದನ್ನು ಪರಿಗಣಿಸಿದೆ.

ಮೇಲೆ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ 2015-16ನೇ ಶೈಕ್ಷಣಿಕ ಸಾಲಿನಲ್ಲಿ ಸ್ನಾತಕೋತ್ತರ ಪದವಿಗಳಾದ ಎಂ.ಬಿ.ಎ/ಎಂ.ಸಿ.ಎ ಕೋರ್ಸುಗಳ ಪ್ರವೇಶ ಪ್ರಕ್ರಿಯೆಯನ್ನು ನಿರ್ವಹಿಸಲು ಮುಂದಿನ ಆದೇಶದವರೆಗೆ ಕರ್ನಾಟಕ ಪರೀಕ್ಷಾ ಪ್ರಾಧಿಕಾರಕ್ಕೆ ವಹಿಸಿ ಆದೇಶಿಸಲಾಗಿದೆ.

ಅಲ್ಲದೇ, ಹಿಂದಿನ ಶೈಕ್ಷಣಿಕ ಸಾಲಿನಲ್ಲಿ ಸ್ನಾತಕೋತ್ತರ ಪದವಿ ಕೋರ್ಸುಗಳ ಸೀಟುಹಂಚಿಕೆ ಪ್ರಮಾಣ ಮತ್ತು ಆಯಾ ಕೋರ್ಸುಗಳಿಗೆ ನಿಗದಿಪಡಿಸಲಾಗಿದ್ದ ಶುಲ್ಕವನ್ನು ಹಿಂದಿನ ವರ್ಷದಂತೆಯೇ ಮುಂದುವರೆಸಲು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 89 ಟಿಇಸಿ 2015,**

**ಬೆಂಗಳೂರು, ದಿನಾಂಕ: 30ನೇ ಮೇ 2015.**

2015-16ನೇ ಶೈಕ್ಷಣಿಕ ಸಾಲಿನಲ್ಲಿ ಸ್ನಾತಕೋತ್ತರ ಪದವಿಗಳಾದ ಎಂ.ಬಿ.ಎ/ಎಂ.ಸಿ.ಎ/ಎಂ.ಇ/ಎಂ.ಟೆಕ್ ಕೋರ್ಸುಗಳ ಸೀಟುಹಂಚಿಕೆ ಹಾಗೂ ಶುಲ್ಕನಿಗದಿ ರಚನೆ ಪ್ರಕ್ರಿಯೆಯನ್ನು ಈ ಕೆಳಗಿನಂತೆ ಸರ್ಕಾರವು ಪರಿಗಣಿಸಿ ಆದೇಶಿಸಿದೆ.

1. ವರ್ಗ: 'ಎ'

(ಅ) 2015-16ನೇ ಶೈಕ್ಷಣಿಕ ಸಾಲಿನಲ್ಲಿ ಎಲ್ಲಾ ಖಾಸಗಿ ಅನುದಾನರಹಿತ ಸಂಸ್ಥೆಗಳಲ್ಲಿನ ಎಂ.ಬಿ.ಎ. ಸ್ನಾತಕೋತ್ತರ ಕೋರ್ಸಿನ ಒಟ್ಟು ವಿದ್ಯಾರ್ಥಿಗಳ ಪ್ರವೇಶಾತಿಯಲ್ಲಿ ಶೇ.50ರಷ್ಟು ವಿದ್ಯಾರ್ಥಿಗಳ ಪ್ರವೇಶಾತಿಯನ್ನು ಎಐಸಿಟಿಇ ಯು ನಡೆಸುವ 'ಸಾಮಾನ್ಯ ನಿರ್ವಹಣಾ ಪ್ರವೇಶ ಪರೀಕ್ಷೆ (Common Management Admission Test conducted by AICTE)' ಯಲ್ಲಿ ವಿದ್ಯಾರ್ಥಿಗಳು ಪಡೆಯುವ ಅರ್ಹತೆಯ ಆಧಾರದ ಮೇಲೆ ಕರ್ನಾಟಕ ಪರೀಕ್ಷಾ ಪ್ರಾಧಿಕಾರವು ನಡೆಸುವ ಆನ್‌ಲೈನ್/ಕೇಂದ್ರೀಕೃತ ಕೌನ್ಸೆಲಿಂಗ್ ಮುಖಾಂತರ ಭರ್ತಿಮಾಡತಕ್ಕದ್ದು. ಉಳಿದ ಶೇ.50ರಷ್ಟು ಸೀಟುಗಳನ್ನು ಆಯಾ ಆಡಳಿತಮಂಡಳಿಗಳು ಕರ್ನಾಟಕ ಖಾಸಗಿ ಸ್ನಾತಕೋತ್ತರ ಪದವಿ ಕಾಲೇಜುಗಳ ಸಂಘದವರು ನಡೆಸುವ

'ಕರ್ನಾಟಕ ನಿರ್ವಹಣಾ ಪ್ರವೇಶ ಪರೀಕ್ಷೆ (Karnataka Management Admission Test conducted by KPPGCA)'ಯಲ್ಲಿ ವಿದ್ಯಾರ್ಥಿಗಳು ಪಡೆಯುವ ಅರ್ಹತೆಯ ಆಧಾರದ ಮೇಲೆ ಮತ್ತು ಸಂಬಂಧಪಟ್ಟ ಪ್ರಾಧಿಕಾರಗಳು ಅಥವಾ ಸಿ–ಮ್ಯಾಟ್ ರ್‍ಯಾಂಕಿಂಗ್‌ನ ಆಧಾರದ ಮೇಲೆ ಶೈಕ್ಷಣಿಕ ಅರ್ಹತೆ ಪಡೆದಿರುವ ಷರತ್ತಿಗೊಳಪಟ್ಟು ಭರ್ತಿಮಾಡಿಕೊಳ್ಳತಕ್ಕದ್ದು.

(ಆ) ಎಂ.ಸಿ.ಎ. ಸ್ನಾತಕೋತ್ತರ ಪದವಿ ಕೋರ್ಸಿನ ಶೇ.50ರಷ್ಟು ಸೀಟುಗಳನ್ನು ಎಲ್ಲಾ ಖಾಸಗಿ ಅನುದಾನರಹಿತ ಸಂಸ್ಥೆಗಳು 'ಸ್ನಾತಕೋತ್ತರ ಸಾಮಾನ್ಯ ಪ್ರವೇಶ ಪರೀಕ್ಷೆ (Post Graduate Common Entrance Test)' ಯಲ್ಲಿ ವಿದ್ಯಾರ್ಥಿಗಳು ಪಡೆಯುವ ಅರ್ಹತೆಯ ಆಧಾರದ ಮೇಲೆ ಕರ್ನಾಟಕ ಪರೀಕ್ಷಾ ಪ್ರಾಧಿಕಾರವು ಮೀಸಲಾತಿ ನೀತಿಯನ್ನು ಅನುಸರಿಸಿ ನಡೆಸುವ ಆನ್‌ಲೈನ್/ಕೇಂದ್ರೀಕೃತ ಕೌನ್ಸಲಿಂಗ್ ಮುಖಾಂತರ ಭರ್ತಿಮಾಡತಕ್ಕದ್ದು.

(ಇ) 2ನೇ ವರ್ಷದ ಎಂ.ಸಿ.ಎ. ಸ್ನಾತಕೋತ್ತರ ಪದವಿ ಕೋರ್ಸಿಗೆ ಮಂಜೂರಾದ ಒಟ್ಟು ಸೀಟುಗಳಲ್ಲಿ ಶೇ.20ರಷ್ಟು ಸೀಟುಗಳನ್ನು 10 + 2 ಹಂತದಲ್ಲಿ ಅಥವಾ ಪದವಿಯಲ್ಲಿ ಗಣಿತಶಾಸ್ತ್ರವನ್ನು ಒಂದು ವಿಷಯವಾಗಿ ಅಭ್ಯಾಸ ಮಾಡಿರುವ ಬಿ.ಸಿ.ಎ., ಬಿ.ಎಸ್‌ಸಿ (ಇನ್‌ಫರ್‌ಮೇಷನ್ ಟೆಕ್ನಾಲಜಿ, ಕಂಪ್ಯೂಟರ್ ಸೈನ್ಸ್) ಕನಿಷ್ಠ 03 ವರ್ಷಗಳ ಅವಧಿಯ ಪದವಿಯನ್ನು ಹೊಂದಿರುವ ವಿದ್ಯಾರ್ಥಿಗಳಿಂದ ಭರ್ತಿಮಾಡಿಕೊಳ್ಳತಕ್ಕದ್ದು. ಲ್ಯಾಟರಲ್ ಎಂಟ್ರಿ ಪ್ರವೇಶಾತಿಗೆ ಅರ್ಹತಾ ಪರೀಕ್ಷೆಯಲ್ಲಿ ಕನಿಷ್ಠ ಶೇ.50ರಷ್ಟು (ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಗಳ ಅಭ್ಯರ್ಥಿಗಳಾದಲ್ಲಿ ಶೇ.45ರಷ್ಟು) ಅಂಕಗಳನ್ನು ಪಡೆದಿರುವ ವಿದ್ಯಾರ್ಥಿಗಳಿಂದ ಭರ್ತಿಮಾಡಿಕೊಳ್ಳತಕ್ಕದ್ದು.

(ಡಿ) ಮೇಲ್ಕಂಡ ಕೋರ್ಸುಗಳಿಗೆ ಪ್ರವೇಶ ಬಯಸುವ ವಿದ್ಯಾರ್ಥಿಗಳು ವಾರ್ಷಿಕ ರೂ.50,000/–ಗಳ ಬೋಧನಾ ಶುಲ್ಕ + ವಿಶ್ವವಿದ್ಯಾಲಯ ಶುಲ್ಕಗಳನ್ನು ಪಾವತಿಸತಕ್ಕದ್ದು.

**2. ವರ್ಗ: ಜಿ**

(ಅ) ಎಂ.ಇ/ಎಂ.ಟೆಕ್ ಸ್ನಾತಕೋತ್ತರ ಪದವಿ ಕೋರ್ಸುಗಳ ಶೇ.80ರಷ್ಟು ಸೀಟುಗಳನ್ನು ಎಲ್ಲಾ ಖಾಸಗಿ ಅನುದಾನರಹಿತ ಸಂಸ್ಥೆಗಳು ಮತ್ತು ಖಾಸಗಿ ಅನುದಾನಿತ ಸಂಸ್ಥೆಗಳ ಅನುದಾನರಹಿತ ಕೋರ್ಸುಗಳಿಗೆ' G.A.T.E, ಅಥವಾ P.G.C.E.T.' ಪರೀಕ್ಷೆಗಳಲ್ಲಿ ವಿದ್ಯಾರ್ಥಿಗಳು ಪಡೆಯುವ ಅರ್ಹತೆಯ ಆಧಾರದ ಮೇಲೆ ಕರ್ನಾಟಕ ಪರೀಕ್ಷಾ ಪ್ರಾಧಿಕಾರವು ಕರ್ನಾಟಕ ಸ್ನಾತಕೋತ್ತರ ಇಂಜಿನಿಯರಿಂಗ್ ಪದವಿ ವಿದ್ಯಾರ್ಥಿಗಳ ಆಯ್ಕೆ ನಿಯಮಗಳು, 2005 {M.E and Master of Technology (M.Tech) Courses Rules, 2005} ರಲ್ಲಿ ವಿಧಿಸಿರುವ ನಿಬಂಧನೆಗಳನ್ವಯ ನಡೆಸುವ ಆನ್‌ಲೈನ್/ಕೇಂದ್ರೀಕೃತ ಕೌನ್ಸಲಿಂಗ್ ಮುಖಾಂತರ ಭರ್ತಿಮಾಡತಕ್ಕದ್ದು. ಈ ಕೋರ್ಸುಗಳಿಗೆ ವಾರ್ಷಿಕ ರೂ.60,000/–ಗಳ ಬೋಧನಾಶುಲ್ಕ + ವಿಶ್ವವಿದ್ಯಾಲಯ ಶುಲ್ಕಗಳನ್ನು ಪಾವತಿಸಬೇಕಾಗಿರುತ್ತದೆ.

(ಆ) ಶೇ.20ರಷ್ಟು ಎಂ.ಇ/ಎಂ.ಟೆಕ್ ಸ್ನಾತಕೋತ್ತರ ಪದವಿ ಕೋರ್ಸುಗಳ ಸೀಟುಗಳನ್ನು ಎಲ್ಲಾ ಖಾಸಗಿ ಅನುದಾನರಹಿತ ಸಂಸ್ಥೆಗಳಲ್ಲಿನ ಅನುದಾನರಹಿತ ಕೋರ್ಸುಗಳಿಗೆ 'G.A.T.E, ಅಥವಾ P.G.C.E.T.' ಪರೀಕ್ಷೆಗಳಲ್ಲಿ ವಿದ್ಯಾರ್ಥಿಗಳು ಪಡೆಯುವ ಅರ್ಹತೆಯ ಆಧಾರದ ಮೇಲೆ ಅಥವಾ ಕೋರ್ಸಿನ ಪ್ರವೇಶಾತಿ ಅರ್ಹತೆ ಕುರಿತಂತೆ ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರ/ವಿಶ್ವವಿದ್ಯಾಲಯಗಳು ನಿಗದಿಪಡಿಸುವ ಪ್ರವೇಶಾತಿ ಅರ್ಹತೆಯ ಆಧಾರದ ಮೇಲೆ ಸಾಮಾನ್ಯ ಪ್ರವೇಶ ಪರೀಕ್ಷೆಯ ನಂತರದಲ್ಲಿ ಖಾಸಗಿ ಶಿಕ್ಷಣ ಸಂಸ್ಥೆಗಳ ಸಂಘದವರು ಸಿದ್ಧಪಡಿಸುವ ಅರ್ಹತಾಪಟ್ಟಿಯ ಆಧಾರದ ಮೇಲೆ ಭರ್ತಿಮಾಡಿಕೊಳ್ಳತಕ್ಕದ್ದು. ಸಂಬಂಧಪಟ್ಟ ಕಾಲೇಜಿನವರು ಈ ಮೇಲೆ ತಿಳಿಸಿದ ಯಾವುದಾದರೂ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರುವ ಅಭ್ಯರ್ಥಿಗಳನ್ನು ಮಾತ್ರ ಪ್ರವೇಶಾತಿಗೆ ಪರಿಗಣಿಸತಕ್ಕದ್ದು. ಈ ಕೋರ್ಸುಗಳಿಗೆ ವಾರ್ಷಿಕ ರೂ.60,000/–ಗಳ ಬೋಧನಾಶುಲ್ಕ + ವಿಶ್ವವಿದ್ಯಾಲಯ ಶುಲ್ಕಗಳನ್ನು ಪಾವತಿಸಬೇಕಾಗಿರುತ್ತದೆ.

3. (ಅ) ಮೇಲ್ಕಂಡ ಕೋರ್ಸುಗಳ ವಿಸ್ತರಣೆಯ ಬಗ್ಗೆ ಸಂಬಂಧಪಟ್ಟ ನಿಯಂತ್ರಣಾ ಪ್ರಾಧಿಕಾರ/ಎಐಸಿಟಿಇ/ ವಿಶ್ವವಿದ್ಯಾಲಯಗಳಿಂದ ಅನುಮೋದನಾ ಪತ್ರವು ಸ್ವೀಕೃತವಾದ ನಂತರ ಸರ್ಕಾರವು ಈ ಎಲ್ಲಾ ಕೋರ್ಸುಗಳಿಗೆ ಸೀಟ್‌ಮ್ಯಾಟ್ರಿಕ್ಸ್ ಅನ್ನು ಹೊರಡಿಸುವುದು.

(ಆ) ಸರ್ಕಾರದ ಆದೇಶದನ್ವಯ ಹೈದ್ರಾಬಾದ್–ಕರ್ನಾಟಕ ವಿಭಾಗಕ್ಕೆ ಸಂಬಂಧಿಸಿದಂತೆ ಮೀಸಲಾತಿಯು ('ಕಲಂ 371–ಜೆ'ರನ್ವಯ) ಎಲ್ಲಾ ಸರ್ಕಾರಿ/ಅನುದಾನಿತ/ಖಾಸಗಿ ಅನುದಾನರಹಿತ ಶಿಕ್ಷಣಸಂಸ್ಥೆಗಳಿಗೆ ಅನ್ವಯವಾಗುತ್ತದೆ.

(ಇ) ಸರ್ಕಾರಿ ಅನುದಾನಿತ ಶಿಕ್ಷಣ ಸಂಸ್ಥೆಗಳಲ್ಲಿನ ಎಲ್ಲಾ ಅನುದಾನಿತ ಕೋರ್ಸುಗಳ ಎಲ್ಲಾ ಸೀಟುಗಳನ್ನು ಸರ್ಕಾರಿ ಸೀಟುಗಳೆಂದು ಪರಿಗಣಿಸಿ ಭರ್ತಿಮಾಡುವುದು ಹಾಗೂ ಸದರಿ ಸೀಟುಗಳಿಗೆ ವಾರ್ಷಿಕ ರೂ.20,000/– ಗಳ ಬೋಧನಾಶುಲ್ಕ + ವಿಶ್ವವಿದ್ಯಾಲಯ ಶುಲ್ಕವನ್ನು ನಿಗದಿಪಡಿಸಿದೆ. ಅದೇ ರೀತಿ, ಸರ್ಕಾರಿ ಶಿಕ್ಷಣ ಸಂಸ್ಥೆಗಳು/ ವಿಶ್ವವಿದ್ಯಾಲಯಗಳು ಮತ್ತು ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯದ ವಿಸ್ತರಣಾ ಕೇಂದ್ರಗಳೂ ಸೇರಿದಂತೆ ಸರ್ಕಾರಿ ಇಂಜಿನಿಯರಿಂಗ್ ಕಾಲೇಜುಗಳಲ್ಲಿನ ಸೀಟುಗಳಿಗೂ ಸಹ ವಾರ್ಷಿಕ ರೂ.20,000/– ಗಳ ಬೋಧನಾಶುಲ್ಕ + ವಿಶ್ವವಿದ್ಯಾಲಯ ಶುಲ್ಕವನ್ನು ನಿಗದಿಪಡಿಸಿದೆ.

4. ಕರ್ನಾಟಕ ಸರ್ಕಾರವು ಪ್ರಸ್ತುತ ಶೈಕ್ಷಣಿಕ ಸಾಲಿಗೆ ಸಂಬಂಧಪಟ್ಟಂತೆ ಆನ್‌ಲೈನ್/ಕೇಂದ್ರೀಕೃತ ಕೌನ್ಸಲಿಂಗ್ ಪ್ರಕ್ರಿಯೆಯ ಮುಖಾಂತರ ವಿದ್ಯಾರ್ಥಿಗಳ ಪ್ರವೇಶಾತಿ ಮಾಡಿಕೊಳ್ಳುವುದನ್ನು ಖಾಸಗಿ/ಅನುದಾನರಹಿತ ಶಿಕ್ಷಣ ಸಂಸ್ಥೆಗಳಿಗೆ ಕಡ್ಡಾಯಗೊಳಿಸಿರುವುದಿಲ್ಲ. ಸಂಬಂಧಪಟ್ಟ ಖಾಸಗಿ ಶಿಕ್ಷಣ ಸಂಸ್ಥೆಗಳು ತಮ್ಮ ಸಂಸ್ಥೆಗೆ ಆಡಳಿತ ಮಂಡಳಿಯ ಕೋಟಾದಿಂದ ಭರ್ತಿಮಾಡಿಕೊಳ್ಳುವ ಸೀಟುಗಳನ್ನು ನ್ಯಾಯಯುತವಾಗಿ ಮತ್ತು ಪಾರದರ್ಶಕವಾಗಿ ಮಾಡುವುದು. ಸಂಬಂಧಪಟ್ಟ ಶಿಕ್ಷಣ

ಸಂಸ್ಥೆಯವರು ಕಡ್ಡಾಯವಾಗಿ ತಮ್ಮ ಸಂಸ್ಥೆಯಲ್ಲಿ ವಿದ್ಯಾರ್ಥಿಗಳ ಪ್ರವೇಶಾತಿಗೆ ಅಳವಡಿಸಿಕೊಂಡಿರುವ ಆಯ್ಕೆವಿಧಾನಗಳ ಬಗ್ಗೆ ಹಾಗೂ ವಿದ್ಯಾರ್ಥಿಗಳು ಅನುಸರಿಸಬೇಕಾಗಿರುವ ವಿಧಿವಿಧಾನಗಳ ಬಗ್ಗೆ ವಿದ್ಯಾರ್ಥಿಗಳಿಗೆ ಸೂಕ್ತ ಮಾರ್ಗದರ್ಶನವನ್ನು ನೀಡುವುದು ಹಾಗೂ ಆಯ್ಕೆಪ್ರಕ್ರಿಯೆಗೆ ಸಂಬಂಧಿಸಿದಂತೆ 'K-MAT/GATE/PGCET/MAT/CAT/JMET ಮತ್ತು XAT ಅಥವಾ ಖಾಸಗಿ ಶಿಕ್ಷಣ ಸಂಸ್ಥೆಗಳ ಸಂಘದವರು ನಡೆಸುವ CET ಪರೀಕ್ಷೆಗಳಲ್ಲಿ, ವಿದ್ಯಾರ್ಥಿಗಳಿಗೆ ತಮಗೆ ಸೂಕ್ತವಾದ ಪರೀಕ್ಷೆಯನ್ನು ಆಯ್ದುಕೊಳ್ಳಲು ಸೂಕ್ತ ಮಾರ್ಗದರ್ಶನ ನೀಡುವುದು. ಇದಕ್ಕೆ ಸಂಬಂಧಿಸಿದಂತೆ ಸರ್ಕಾರವು ಒಂದು 'ಮೇಲ್ವಿಚಾರಣಾ ಸಮಿತಿ'ಯನ್ನು ರಚಿಸಲಿದ್ದು, ಸದರಿ ಸಮಿತಿಯು ಈ ಎಲ್ಲಾ ಶಿಕ್ಷಣ ಸಂಸ್ಥೆಗಳು ತಮ್ಮ ಸಂಸ್ಥೆಗಳಿಗೆ ವಿದ್ಯಾರ್ಥಿಗಳನ್ನು ಆಯ್ಕೆ ಮಾಡುವಾಗ ಸರ್ಕಾರದ ಆದೇಶಗಳಲ್ಲಿ ತಿಳಿಸಿರುವ ಎಲ್ಲಾ ನಿಯಮಗಳನ್ನು/ ವಿಧಿವಿಧಾನಗಳನ್ನು ಅನುಸರಿಸಿರುವ ಬಗ್ಗೆ ಆಗಿಂದಾಗ್ಯೆ ಭೇಟಿ ನೀಡಿ ಪರಿಶೀಲಿಸುವುದು.

5. ಕರ್ನಾಟಕ ಖಾಸಗಿ ಸ್ನಾತಕೋತ್ತರ ಪದವಿ ಕಾಲೇಜುಗಳ ಸಂಘದವರು ಬೆಂಗಳೂರಿನಲ್ಲಿ ಒಂದು ದೂರು ಪರಿಹಾರ ಕೇಂದ್ರವನ್ನು ಸ್ಥಾಪಿಸಿ, ಯಾವುದೇ ಸಂಸ್ಥೆ/ವಿದ್ಯಾರ್ಥಿಯಿಂದ ಸ್ವೀಕೃತವಾಗುವ ದೂರುಗಳನ್ನು ಪರಿಶೀಲಿಸಿ ಪರಿಹರಿಸುವುದು. ಯಾವುದೇ ಸಂಸ್ಥೆ/ವಿದ್ಯಾರ್ಥಿಯಿಂದ ಸ್ವೀಕೃತವಾಗುವ ದೂರುಗಳನ್ನು ಪರಿಹರಿಸುವಲ್ಲಿ ದೂರು ಪರಿಹಾರ ಕೇಂದ್ರವು ವಿಫಲವಾದಲ್ಲಿ ವಿದ್ಯಾರ್ಥಿಗಳ ಶೈಕ್ಷಣಿಕ ಹಿತದೃಷ್ಟಿಯಿಂದ ಸರ್ಕಾರವು ಮಧ್ಯಪ್ರವೇಶಿಸಿ ಸೂಕ್ತ ಕ್ರಮ ಕೈಗೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ನಾಗಭೂಷಣ್**
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ತಾಂತ್ರಿಕ ಶಿಕ್ಷಣ)

**ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ೩) (೧೦೦ ಪ್ರತಿಗಳು)**

***RNI No. KARBIL/2001/47147***

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| | | |
|---|---|---|
| ಭಾಗ– ***I*** | ಬೆಂಗಳೂರು, ಗುರುವಾರ, ಜೂನ್ ೦೪, ೨೦೧೫ (ಜ್ಯೇಷ್ಠ ೧೪, ಶಕ ವರ್ಷ ೧೯೩೭) | ನಂ. ೬೩೭ |
| ***Part– I*** | ***Bengaluru, Thursday, June 04, 2015 (Jyeishta 14, Shaka Varsha 1937)*** | ***No. 637*** |


## FOREST, ECOLOGY AND ENVIRONMENT SECRETARIAT
## PROCEEDINGS OF THE GOVERNMENT OF KARNATKA

**Sub:** Tibetan Rehabilitation Settlements located in forest areas in Karnataka State.

**Read:** 1) Minutes of the meeting held under the Chairmanship of Chief Secretary to Govt., in his chambers on 04/04/2014

2) Proceedings of the Meeting Held on 10/02/2015 under the Chairmanship of Addl., Chief Secretary to Govt., Forest, Ecology and Environment Department.

3) The Tibetan Rehabilitation Policy-2014 communicated to State Governments by Ministry of Home Affairs, GoI, vide No.11/2/2014-RHS/MD dated 20/10/2014.

**Preamble:** Many Tibetans under the Leadership of His Holiness the Dalai Lama, came to India along with their families and have been living in India since the past 50 years. Many of such Tibetan refugees were rehabilitated in Karnataka, under the policy of Government of India. These rehabilitation Settlements in Karnataka are located in Mundgod Taluk, North Kanara Dt; Bylakuppe, Periyapatna Taluk, Mysore Dt; Gurupura, Hunsur Taluk, Mysore Dt; Kollegal Taluk, Chamraj Nagar Dt. Notified Forest Areas were released to accommodate these Tibetan Rehabilitation Settlements. Though these areas were released and diverted for non-forestry purpose of rehabilitating Tibetan refugees, legal status of these lands remained “Forest” as no de-notification orders were issued under Karnataka Forest Act-1963. Revenue Department has leased the lands to Tibetan Refugees and the lease rent is collected annually.

A meeting was held on 04/04/2014, under the Chairmanship of the Chief Secretary to Govt., of Karnataka, attended by senior officers of Revenue, Forest, Tourism, Agriculture departments and representatives of Central Tibetan Administration (CTA) led by Ms Dolma Gyari, Minister for Home, CTA, Dharmashala, Himachal Pradesh; to look in to various issues concerning the Tibetan settlements in Karnataka State. One of the issues discussed was that RTCs were not issued to the Tibetan cultivators in the settlements as forest areas released for Tibetan rehabilitation were not de-notified though the areas were released and diverted 50 years back, much prior to the Forest Conservation Act, 1980 came into force. In the absence of RTC entries, it was stated that the individual Tibetan cultivators are deprived of agriculture related subsidies, incentives and loans from the Government and Banks. Minister for Home, CTA stated that the Central Tibetan Administration will take the onus of proper protection and utilisation of lands leased for rehabilitation of Tibetans and requested for uniform long-term lease of lands for viability and sustainability of these Tibetan Settlements.

*Tibetan Rehabilitation Policy -2014*, communicated by Government of India to State Governments, has issued guidelines to bring in uniformity across all the States and to improve the general satisfaction level of the Refugees. The policy has set the following methodology for leasing the lands for Tibetan Rehabilitation Settlements.

1) All State Governments must necessarily sign a lease document for the land occupied by the Tibetan Refugees as per the suggested standard lease

document and the State Government may make such necessary changes to the standard format.

2) The lease document should not be signed with individual Tibetans, but with the duly authorised representative of the Central Tibetan Relief Committee (CTRC), under His Holiness Dalai Lama, located at Dharmashala, HP state.

3) The Lease Should be signed for a period of twenty years or till it is revoked/cancelled (by an order of GoI or till rehabilitation facilities provided to Tibetan refugees are cancelled or withdrawn by the Government of India).

4) A Rent Tenancy Certificate must be issued by the State Government as per the applicable law. The State Govt., shall collect the dues, revenue and fees from the Local Settlement Officer of the Tibetan Settlement. The Certificate should mention the following
   - Owner: Government
   - Lessee: CTRC
   - Cultivated by: Name of the Tibetan refugee who is cultivating the land)

5) The CTRC should be allowed to decide which portion of the land can be used for agricultural, residential, commercial religious activity or any such activity so that the Tibetan Families can follow their culture and religions unhindered and yet are able to make an economic living out of the land.

A meeting was convened under the Chairmanship of Addl., Chief Secretary to Govt., Forest, Ecology & Environment Department, on 10/02/2015, attended by Senior Forest, Revenue Officials and a team of Central Tibetan Administration led by Smt Dolma Gyari, Hon'ble Home Minister, Central Tibetan Administration. The following is the summary of discussions and decisions regarding the Tibetan Refugee Settlements in forest areas released for the purpose in Karnataka.

1) That the forest areas released by Government were given for Tibetan Settlement on lease only and that no occupancy based on grant is accorded, as a policy of Government of India.
2) All the forest areas for Tibetan Rehabilitation were released and diverted to Non-forestry purpose during 1960s and 1970s, much prior to the enactment of Forest Conservation Act, 1980, in pursuance of the policy of Govt., of India.
3) After examining the issue in totality it felt not-necessary to de-notify these forest areas under Karnataka Forest Act, 1963 as they have been only under lease after their release and diversion during 1960s and 1970s.
4) The forest areas will be leased to the Central Tibetan Rehabilitation Committee (CTRC); Status of land is shown as "Forest" in RTC , with names of individual Tibetan cultivators mentioned in the RTC.
5) The land so leased cannot be pledged for availing loan either by CTRC or by individual refugees.
6) Lease rent as determined by Government will be paid annually to Revenue Department.
7) This arrangement is in accordance with the Central Tibetan Policy-2014, communicated to State Governments by Ministry of Home affairs, GoI.

The following is the list of forest areas released for Tibetan Refugee Settlement in Karnataka State.

| **Location** | **Government Order** | **Extent Ac-guntas** |
|---|---|---|
| 1) Doeguelling Tibetan Settlement, Mundgod, Uttara Kannada Dt | 2) AFD 65 FGN 63 dated 10/07/1964<br>3) AFD 65 FGN 63 dated 17/08/1967<br>4) AFD 65 FGN 63 dated 04/03/1968<br>5) AFD 453 FGL 68 dated 25/10/1969 | 4045-29 |
| 2) TRR1 (Old Tibetan Settlement), Bylakuppe Periyapatna Taluk, Mysore Dt | 1) AFD 120 FGN 60 Dated 07/10/1960 | 3504-37 |

(ಡಿ) "ಕೌನ್ಸಿಲಿಂಗ್ ಪ್ರಕ್ರಿಯೆ" ಎಂದರೆ, ಹಂಚಿಕೆಗಾಗಿ ಅಥವಾ ಸ್ಥಳನಿಯುಕ್ತಿಗಾಗಿ ಪರಿಗಣಿಸಿರುವ ವ್ಯಕ್ತಿಗೆ, ನಿಯಮಿಸಬಹುದಾದ ಅಂಥ ನಿಯಮಗಳಿಗನುಸಾರವಾಗಿ ಮೆರಿಟಿನ ಆಧಾರದ ಮೇಲೆ ಆದ್ಯತೆಯಲ್ಲಿ ಸ್ಥಳವನ್ನು ಆಯ್ಕೆ ಮಾಡಲು ಒಬ್ಬ ವ್ಯಕ್ತಿಗೆ ಅವಕಾಶವನ್ನು ನೀಡುವ ಪ್ರಕ್ರಿಯೆ;

(ಇ) "ಗ್ರಾಮೀಣ ಪ್ರದೇಶ" ಎಂದರೆ, ನಗರ ಪ್ರದೇಶ ಆಗಿರದ ಒಂದು ಪ್ರದೇಶ;

(ಎಫ್) "ಸೂಪರ್ ಸ್ಪೇಷಾಲಿಟಿ ಕೋರ್ಸುಗಳು" ಎಂದರೆ, ವೈದ್ಯಕೀಯದಲ್ಲಿ ಸೂಪರ್ ಸ್ಪೇಷಾಲಿಟಿ ಪದವಿಯನ್ನು ಪ್ರದಾನ ಮಾಡುವುದಕ್ಕೆ ಸಂಬಂಧಿಸಿದ ಕೋರ್ಸುಗಳು;

(ಜಿ) "ವಿಶ್ವವಿದ್ಯಾಲಯ" ಎಂದರೆ, ರಾಜ್ಯದಲ್ಲಿನ ಕಾನೂನಿನ ಮೂಲಕ ಸ್ಥಾಪಿತವಾದ ವಿಶ್ವವಿದ್ಯಾಲಯ ಅಥವಾ ವಿಶ್ವವಿದ್ಯಾಲಯ ಅನುದಾನಗಳ ಆಯೋಗ ಅಧಿನಿಯಮ, 1956ರ (1956ರ ಕೇಂದ್ರ ಅಧಿನಿಯಮ 3) ಅಡಿಯಲ್ಲಿ ಭಾವಿತ ವಿಶ್ವವಿದ್ಯಾಲಯವೆಂದು ಘೋಷಿಸಲ್ಪಟ್ಟ ಒಂದು ವಿಶ್ವವಿದ್ಯಾಲಯ;

(ಎಚ್) "ನಗರ ಪ್ರದೇಶ" ಎಂದರೆ, ನಗರಪಾಲಿಕೆ, ನಗರಸಭೆ, ಪುರಸಭೆ, ಪಟ್ಟಣ ಪಂಚಾಯತಿ ಅಥವಾ ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976 ಅಥವಾ ಕರ್ನಾಟಕ ಪೌರಸಭೆಗಳ ಅಧಿನಿಯಮ, 1964ರ ಅಡಿಯಲ್ಲಿ ನಿರ್ದಿಷ್ಟಪಡಿಸಿದ ಇತರ ಅಧಿಸೂಚಿತ ಪ್ರದೇಶಗಳ ಮಿತಿಗಳೊಳಗೆ ಇರುವ ಯಾವುದೇ ಪ್ರದೇಶ ಮತ್ತು ಸರ್ಕಾರವು ಕಾಲಕಾಲಕ್ಕೆ ಅಧಿಸೂಚಿಸಬಹುದಾದಂತೆ ಮೇಲೆ ಅಧಿಸೂಚಿಸಿದ ಪ್ರದೇಶಗಳ ಪರಿಮಿತಿಗಳಿಂದ ಅಂಥ ದೂರದವರೆಗೆ ಇರುವ ಪ್ರದೇಶ;

**3. ವೈದ್ಯಕೀಯ ಕೋರ್ಸನ್ನು ಪೂರ್ಣಗೊಳಿಸಿದ ಅಭ್ಯರ್ಥಿಗಳ ಕಡ್ಡಾಯ ಸೇವೆ.–** (1) ಎಂಬಿಬಿಎಸ್ ಪದವಿ ಕೋರ್ಸನ್ನು ಯಶಸ್ವಿಯಾಗಿ ಪೂರ್ಣಗೊಳಿಸಿದ ಮತ್ತು ಒಂದು ವರ್ಷದ ಇಂಟರ್ನ್‌ಶಿಪ್ ಪೂರ್ಣಗೊಳಿಸಿದ ತರುವಾಯ ಪ್ರತಿಯೊಬ್ಬ ಅಭ್ಯರ್ಥಿಯು, ನಿಯಮಿಸಬಹುದಾದ ಅಂಥ ವಿಧಾನದಲ್ಲಿ ಕೌನ್ಸಿಲಿಂಗ್‌ನ ಪ್ರಕ್ರಿಯೆಯ ಮೂಲಕ ಮೆರಿಟ್ ಆಧಾರದ ಮೇಲೆ ಹಂಚಿಕೆಯಾದ ಗ್ರಾಮೀಣ ಪ್ರದೇಶಗಳಲ್ಲಿನ ಸರ್ಕಾರಿ ಪ್ರಾಥಮಿಕ ಆರೋಗ್ಯ ಕೇಂದ್ರಗಳು ಅಥವಾ ಸರ್ಕಾರಿ ಆಸ್ಪತ್ರೆಗಳಲ್ಲಿ ಒಂದು ವರ್ಷದ ಕಡ್ಡಾಯ ಗ್ರಾಮೀಣ ಸೇವೆಗೆ ಒಳಪಡತಕ್ಕದ್ದು. ಅಂಥ ಸೇವಾ ಅವಧಿಯಲ್ಲಿ ಆತನನ್ನು ಕಿರಿಯ ನಿವಾಸಿ ತರಬೇತಿ ಪಡೆಯುವವನು (ಜೂನಿಯರ್ ರೆಸಿಡೆಂಟ್ ಟ್ರೈನಿ) ಎಂದು ಕರೆಯತಕ್ಕದ್ದು.

(2) (1)ನೇ ಉಪಪ್ರಕರಣದ ಅಡಿಯಲ್ಲಿ ಕಡ್ಡಾಯ ಗ್ರಾಮೀಣ ಸೇವಾ ತರಬೇತಿಯನ್ನು ಹೊಂದಲು ಅಗತ್ಯಪಡಿಸಲಾಗಿದ್ದು ಆದರೆ ತರಬೇತಿಗೆ ಒಳಪಡದ ಅಂಥ ಅಭ್ಯರ್ಥಿಗೆ ಯಾವುದೇ ವಿಶ್ವವಿದ್ಯಾಲಯವು ಪದವಿಯನ್ನು ಪ್ರದಾನ ಮಾಡತಕ್ಕದ್ದಲ್ಲ:

ಪರಂತು, ಯಾವುದೇ ಸ್ನಾತಕೋತ್ತರ ಪದವಿ ಅಥವಾ ಡಿಪ್ಲೋಮೊ ಕೋರ್ಸನ್ನು ಮಾಡಲು ಆಯ್ಕೆಯಾದ ಮತ್ತು ಮುಂದುವರೆಸುತ್ತಿರುವ ಅಭ್ಯರ್ಥಿಗಳ ಸಂದರ್ಭದಲ್ಲಿ, ಅಂಥ ಕೋರ್ಸು ಪೂರ್ಣಗೊಂಡ ನಿಕಟ ತರುವಾಯ ಒಂದು ವರ್ಷದ ಕಡ್ಡಾಯ ಸೇವೆಗೆ ಒಳಗಾಗಬಹುದು ಮತ್ತು ಅಂಥ ಅಭ್ಯರ್ಥಿಗೆ, ಸ್ನಾತಕೋತ್ತರ ಪದವಿಯನ್ನು ಮುಂದುವರೆಸುವ ಉದ್ದೇಶಕ್ಕೆ ಸಿಂಧುವಾಗುವಂತೆ, ತಾತ್ಕಾಲಿಕ ಎಂಬಿಬಿಎಸ್ ಪ್ರಮಾಣಪತ್ರವನ್ನು ನೀಡಬಹುದು.

(3) ಒಂದು ವರ್ಷದ ಕಡ್ಡಾಯ ಗ್ರಾಮೀಣ ಸೇವಾ ತರಬೇತಿಗೆ ಒಳಪಟ್ಟ ಪ್ರತಿಯೊಬ್ಬ ಅಭ್ಯರ್ಥಿಗೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳಲ್ಲಿ ಸಾಮಾನ್ಯ ಕರ್ತವ್ಯ ನಿರತ ವೈದ್ಯರ ಒಟ್ಟು ಕನಿಷ್ಠ ಸಂಬಳಕ್ಕಿಂತ ನೂರು ರೂಪಾಯಿಗಳಷ್ಟು ಕಡಿಮೆಗೆ ಸಮನಾಗಿರುವ ಅಂಥ ವೃತ್ತಿ ವೇತನವನ್ನು (ಸ್ಟೈಫಂಡ್) ಸಂದಾಯ ಮಾಡತಕ್ಕದ್ದು.

(4) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ಏನೇ ಒಳಗೊಂಡಿದ್ದರೂ, (1)ನೇ ಉಪ ಪ್ರಕರಣದಲ್ಲಿ ಕಡ್ಡಾಯ ಗ್ರಾಮೀಣ ಸೇವಾ ತರಬೇತಿಗೆ ಒಳಪಡದಿರುವಂಥ ಪ್ರತಿಯೊಬ್ಬ ಅಭ್ಯರ್ಥಿಯು, ಕರ್ನಾಟಕ ವೈದ್ಯಕೀಯ ನೋಂದಣಿ ಅಧಿನಿಯಮ, 1961ರಡಿಯಲ್ಲಿ ಅಥವಾ ಭಾರತೀಯ ವೈದ್ಯಕೀಯ ಪರಿಷತ್ತು ಅಧಿನಿಯಮ, 1956 ರಡಿಯಲ್ಲಿ ರಾಜ್ಯದಲ್ಲಿ ಶಾಶ್ವತ ನೋಂದಣಿಗೆ ಅರ್ಹರಾಗಿರತಕ್ಕದ್ದಲ್ಲ:

ಪರಂತು, ಅಂಥ ಅಭ್ಯರ್ಥಿಗಳಿಗೆ, ತರಬೇತಿಯ ಅವಧಿಯಲ್ಲಿ ರೋಗಿಗಳಿಗೆ ಸ್ವತಂತ್ರವಾಗಿ ಚಿಕಿತ್ಸೆ ನೀಡಲು ಮತ್ತು ಔಷಧಿಗಳನ್ನು ನಿಯಮಿಸಲು ಸದರಿ ತರಬೇತಿಗೆ ಒಳಪಡುವವರೆಗೆ, ತಾತ್ಕಾಲಿಕ ನೋಂದಣಿಯನ್ನು ನೀಡಬಹುದಾಗಿದೆ.

**4. ಸ್ನಾತಕೋತ್ತರ ವೈದ್ಯಕೀಯ ಕೋರ್ಸುಗಳನ್ನು ಪೂರ್ಣಗೊಳಿಸಿದ ಅಭ್ಯರ್ಥಿಗಳ ಕಡ್ಡಾಯ ಸೇವಾ ತರಬೇತಿ.–** (1) 3ನೇ ಪ್ರಕರಣದ (1)ನೇ ಉಪಪ್ರಕರಣದ ಅಡಿಯಲ್ಲಿ ಕಡ್ಡಾಯ ಗ್ರಾಮೀಣ ಸೇವಾ ತರಬೇತಿಗೆ ಒಳಪಡಿಸಿದ ಅಭ್ಯರ್ಥಿಗಳನ್ನು ಹೊರತುಪಡಿಸಿ, ಸ್ನಾತಕೋತ್ತರ ಡಿಪ್ಲೋಮೊ ಅಥವಾ ಪದವಿಯನ್ನು ಯಶಸ್ವಿಯಾಗಿ ಪೂರ್ಣಗೊಳಿಸಿದಂಥ ಪ್ರತಿಯೊಬ್ಬ ಅಭ್ಯರ್ಥಿಯು, ನಿಯಮಿಸಬಹುದಾದ ಅಂಥ ವಿಧಾನದಲ್ಲಿ ರಾಜ್ಯದಲ್ಲಿ ಕೌನ್ಸಿಲಿಂಗ್ ಪ್ರಕ್ರಿಯೆಯ ಮೂಲಕ ಮೆರಿಟ್ ಆಧಾರದ ಮೇಲೆ ಆಯ್ಕೆಯಾದ ಮತ್ತು ಸ್ಥಳ ನಿಯುಕ್ತಿಯಾದ ನಗರ ಪ್ರದೇಶದಲ್ಲಿ ಇರುವ ಸರ್ಕಾರಿ ಆಸ್ಪತ್ರೆಗಳಲ್ಲಿ ಒಂದು ವರ್ಷದ ಕಡ್ಡಾಯ ಸೇವಾ ತರಬೇತಿಗೆ ಒಳಪಡತಕ್ಕದ್ದು. ಅಂಥ ಸೇವಾ ಅವಧಿಯಲ್ಲಿ ಆತನನ್ನು ಹಿರಿಯ ನಿವಾಸಿ ತರಬೇತಿ ಪಡೆಯುವವನು (ಸೀನಿಯರ್ ರೆಸಿಡೆಂಟ್ ಟ್ರೈನಿ) ಎಂದು ಕರೆಯತಕ್ಕದ್ದು. ಆತನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವಿಶೇಷತಜ್ಞರ ಒಟ್ಟು ಕನಿಷ್ಠ ಸಂಬಳಕ್ಕಿಂತ ನೂರು ರೂಪಾಯಿಗಳಷ್ಟು ಕಡಿಮೆಗೆ ಸಮನಾಗಿರುವ ನಿಯಮಿಸಬಹುದಾದ ಅಂಥ ವೃತ್ತಿ ವೇತನಕ್ಕೆ ಅರ್ಹನಾಗಿರತಕ್ಕದ್ದು.

(2) (1)ನೇ ಉಪ ಪ್ರಕರಣದ ಅಡಿಯಲ್ಲಿ ಅಗತ್ಯಪಡಿಸಲಾದಂತೆ ಮತ್ತು ನಿಯಮಿಸಲಾದಂತೆ ಕೌನ್ಸಿಲಿಂಗ್ ಪ್ರಕ್ರಿಯೆಯ ಮೂಲಕ ಹಂಚಿಕೆಯಾದ ಅಥವಾ ಸ್ಥಳನಿಯುಕ್ತಿಯಾದ ಸರ್ಕಾರಿ ಆಸ್ಪತ್ರೆಯಲ್ಲಿ ಕಡ್ಡಾಯ ಸೇವಾ ತರಬೇತಿಯಲ್ಲಿ ಸೇರಿಕೊಳ್ಳದಂಥ ಮತ್ತು ಒಳಪಡದ ಅಂಥ ಅಭ್ಯರ್ಥಿಗಳಿಗೆ ಯಾವುದೇ ವಿಶ್ವವಿದ್ಯಾಲಯವು, ರಾಜ್ಯದಲ್ಲಿ ಸ್ನಾತಕೋತ್ತರ ಪದವಿ ಅಥವಾ ಡಿಪ್ಲೋಮೊವನ್ನು ಪ್ರದಾನಮಾಡತಕ್ಕದ್ದಲ್ಲ:

ಪರಂತು, ಸೂಪರ್ ಸ್ಪೆಷಾಲಿಟಿ ಕೋರ್ಸನ್ನು ಮಾಡಲು ಆಯ್ಕೆಯಾದ ಮತ್ತು ಮುಂದುವರೆಸುತ್ತಿರುವ ಅಭ್ಯರ್ಥಿಗಳ ಸಂದರ್ಭದಲ್ಲಿ, ಅಂಥ ಕೋರ್ಸು ಪೂರ್ಣಗೊಂಡ ನಿಕಟ ತರುವಾಯ ಒಂದು ವರ್ಷದ ಕಡ್ಡಾಯ ಸೇವೆಗೆ ಒಳಗಾಗಬಹುದು ಮತ್ತು

ಅಂಥ ಅಭ್ಯರ್ಥಿಗಳಿಗೆ ಸೂಪರ್ ಸ್ಪೆಷಾಲಿಟಿ ಕೋರ್ಸನ್ನು ನಡೆಸುವ ಉದ್ದೇಶಕ್ಕಾಗಿ ಮಾತ್ರವೇ ಸಿಂಧುವಾಗುವಂತೆ ತಾತ್ಕಾಲಿಕ ಎಂಬಿಬಿಎಸ್ ಮತ್ತು ಸ್ನಾತಕೋತ್ತರ ಪದವಿ ಪ್ರಮಾಣಪತ್ರಗಳನ್ನು ನೀಡಬಹುದು:

ಮತ್ತು ಪರಂತು, ಅಂಥ ಅಭ್ಯರ್ಥಿಗಳಿಗೆ, ತರಬೇತಿಯ ಅವಧಿಯಲ್ಲಿ ರೋಗಿಗಳಿಗೆ ಸ್ವತಂತ್ರವಾಗಿ ಚಿಕಿತ್ಸೆ ನೀಡಲು ಮತ್ತು ಔಷಧಿಗಳನ್ನು ನಿಯಮಿಸಲು ಸದರಿ ತರಬೇತಿಗೆ ಒಳಪಡುವವರೆಗೆ, ತಾತ್ಕಾಲಿಕ ನೋಂದಣಿಯನ್ನು ನೀಡಬಹುದಾಗಿದೆ.

**5. ಸೂಪರ್‌ಸ್ಪೆಷಾಲಿಟಿ ಪದವಿ ಕೋರ್ಸು ಪೂರ್ಣಗೊಳಿಸಿದ ಅಭ್ಯರ್ಥಿಯ ಕಡ್ಡಾಯ ಸೇವಾ ತರಬೇತಿ.–** (1) ಸೂಪರ್ ಸ್ಪೆಷಾಲಿಟಿ ಕೋರ್ಸುಗಳನ್ನು ಯಶಸ್ವಿಯಾಗಿ ಪೂರ್ಣಗೊಳಿಸಿದ ಪ್ರತಿಯೊಬ್ಬ ಅಭ್ಯರ್ಥಿಯು, ನಿಯಮಿಸಬಹುದಾದ ಅಂಥ ವಿಧಾನದಲ್ಲಿ ರಾಜ್ಯದಲ್ಲಿ ಕೌನ್ಸಿಲಿಂಗ್ ಪ್ರಕ್ರಿಯೆಯ ಮೂಲಕ ಮೆರಿಟ್ ಆಧಾರದ ಮೇಲೆ ಆಯ್ಕೆಯಾದ ಮತ್ತು ಸ್ಥಳ ನಿಯುಕ್ತಿಯಾದ ಹಂಚಿಕೆಯಾದ ಜಿಲ್ಲಾ ಸರ್ಕಾರಿ ಆಸ್ಪತ್ರೆಯಲ್ಲಿ ಒಂದು ವರ್ಷದ ಕಡ್ಡಾಯ ಸೇವಾ ತರಬೇತಿಗೆ ಒಳಪಡತಕ್ಕದ್ದು. ಆತನಿಗೆ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಹಿರಿಯ ವಿಶೇಷತಜ್ಞರ ಒಟ್ಟು ಕನಿಷ್ಠ ಸಂಬಳಕ್ಕಿಂತ ನೂರು ರೂಪಾಯಿಗಳು ಕಡಿಮೆಗೆ ಸಮನಾಗಿರುವ ನಿಯಮಿಸಬಹುದಾದ ಅಂಥ ವೃತ್ತಿವೇತನವನ್ನು ಸಂದಾಯ ಮಾಡತಕ್ಕದ್ದು:

ಪರಂತು, 3ನೇ ಪ್ರಕರಣದ (1)ನೇ ಉಪಪ್ರಕರಣ ಅಥವಾ 4ನೇ ಪ್ರಕರಣದ (1)ನೇ ಉಪಪ್ರಕರಣದಡಿಯಲ್ಲಿ ಕಡ್ಡಾಯ ಸೇವಾ ತರಬೇತಿಯನ್ನು ಮಾಡಿದ ಅಭ್ಯರ್ಥಿಗಳನ್ನು ಈ ಪ್ರಕರಣದಡಿಯಲ್ಲಿನ ಕಡ್ಡಾಯ ಸೇವಾ ತರಬೇತಿಯಿಂದ ವಿನಾಯತಿಗೊಳಿಸತಕ್ಕದ್ದು.

(2) (1)ನೇ ಉಪಪ್ರಕರಣದ ಅಡಿಯಲ್ಲಿ ಸ್ಥಳ ನಿಯುಕ್ತಿಗೊಳಿಸಿದ ಕಡ್ಡಾಯ ಸೇವಾ ತರಬೇತಿಯನ್ನು ಹೊಂದಲು ಅಗತ್ಯಪಡಿಸಲಾಗಿದ್ದು ಆದರೆ ಅಂಥ ತರಬೇತಿಗೆ ಒಳಪಡದ ಅಂಥ ಅಭ್ಯರ್ಥಿಗಳಿಗೆ ಯಾವುದೇ ವಿಶ್ವವಿದ್ಯಾಲಯವೂ ಸೂಪರ್ ಸ್ಪೆಷಾಲಿಟಿ ಪದವಿಯನ್ನು ಪ್ರದಾನಮಾಡತಕ್ಕದ್ದಲ್ಲ.

**6. ದಂಡ.–** ಈ ಅಧಿನಿಯಮದಲ್ಲಿ ನಿರ್ದಿಷ್ಟಪಡಿಸಿದ ಯಾವುವೇ ಉಪಬಂಧಗಳನ್ನು ಯಾವೊಬ್ಬನು ಉಲ್ಲಂಘಿಸಿದಲ್ಲಿ, ಆತನು, ಹದಿನೈದು ಲಕ್ಷರೂಪಾಯಿಗಳಿಗೆ ಕಡಿಮೆಯಲ್ಲದ ಆದರೆ ಮೂವತ್ತು ಲಕ್ಷ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ದಂಡದೊಂದಿಗೆ ದಂಡಿತನಾಗತಕ್ಕದ್ದು.

**7. ಇತರ ಕಾನೂನುಗಳನ್ನು ಅಧಿಕ್ರಮಿಸುವ ಅಧಿನಿಯಮ.–** ತತ್ಕಾಲದಲ್ಲಿ ಜಾರಿಯಲ್ಲಿರುವ ಇತರ ಯಾವುದೇ ಕಾನೂನಿನಲ್ಲಿ ಅಸಂಗತವಾದುದು ಏನೇ ಇದ್ದರೂ, ಈ ಅಧಿನಿಯಮದ ಉಪಬಂಧಗಳು ಜಾರಿಯಲ್ಲಿರತಕ್ಕದ್ದು.

**8. ತೊಂದರೆಗಳ ನಿವಾರಣೆಗೆ ಅಧಿಕಾರ.– (1)** ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸುವಲ್ಲಿ ಯಾವುದೇ ತೊಂದರೆ ಉದ್ಭವಿಸಿದರೆ, ಸರ್ಕಾರವು, ಸರ್ಕಾರಿ ರಾಜ್ಯ ಪತ್ರದಲ್ಲಿ ಆದೇಶವನ್ನು ಪ್ರಕಟಿಸುವ ಮೂಲಕ, ಈ ಅಧಿನಿಯಮದ ಉಪಬಂಧಗಳಿಗೆ ಅಸಂಗತವಾಗದಂತೆ ಮತ್ತು ತೊಂದರೆಗಳನ್ನು ನಿವಾರಿಸಲು ಅವಶ್ಯವೆಂದು ಅಥವಾ ಯುಕ್ತವೆಂದು ತನಗೆ ಕಂಡುಬರುವಂತೆ ಉಪಬಂಧವನ್ನು ಕಲ್ಪಿಸಬಹುದು:

ಪರಂತು, ಈ ಅಧಿನಿಯಮದ ಪ್ರಾರಂಭವಾದ ದಿನಾಂಕದಿಂದ ಮೂರು ವರ್ಷಗಳ ಅವಧಿಯು ಮುಕ್ತಾಯವಾದ ತರುವಾಯ ಅಂಥ ಯಾವುದೇ ಆದೇಶವನ್ನು ಮಾಡತಕ್ಕದ್ದಲ್ಲ.

**9. ನಿಯಮಗಳ ರಚನಾಧಿಕಾರ.–** (1) ಸರ್ಕಾರವು, ಅಧಿಸೂಚನೆಯ ಮೂಲಕ ಮತ್ತು ಪೂರ್ವ ಪ್ರಕಟಣೆಯ ತರುವಾಯ, ಈ ಅಧಿನಿಯಮದ ಉದ್ದೇಶಗಳನ್ನು ಕಾರ್ಯಗತಗೊಳಿಸುವುದಕ್ಕಾಗಿ ನಿಯಮಗಳನ್ನು ರಚಿಸಬಹುದು.

(2) ಈ ಪ್ರಕರಣದ ಅಡಿಯಲ್ಲಿ ರಚಿಸಿದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ನಂತರ ಆದಷ್ಟು ಬೇಗನೆ ರಾಜ್ಯ ವಿಧಾನ ಮಂಡಲವು ಅಧಿವೇಶನದಲ್ಲಿದ್ದರೆ ಅದರ ಪ್ರತಿಯೊಂದು ಸದನದ ಮುಂದೆ, ಮತ್ತು ಅದು ಅಧಿವೇಶನದಲ್ಲಿಲ್ಲದಿದ್ದರೆ, ನಿಕಟ ತರುವಾಯದ ಒಟ್ಟು ಮೂವತ್ತು ದಿನಗಳ ಅವಧಿಯ ಒಂದು ಅಧಿವೇಶನದಲ್ಲಿ ಅಥವಾ ಒಂದಾದ ಮೇಲೊಂದರಂತೆ ಬರುವ ಎರಡು ಅಥವಾ ಹೆಚ್ಚು ಅಧಿವೇಶನಗಳಲ್ಲಿ ಮಂಡಿಸತಕ್ಕದ್ದು ಮತ್ತು ಅದನ್ನು ಹಾಗೆ ಮಂಡಿಸಲಾದ ಅಧಿವೇಶನವು ಅಥವಾ ಅದರ ನಿಕಟೋತ್ತರದ ಅಧಿವೇಶನವು ಮುಕ್ತಾಯವಾಗುವುದಕ್ಕೆ ಮುಂಚೆ, ಎರಡೂ ಸದನಗಳು ಆ ನಿಯಮದಲ್ಲಿ ಯಾವುದೇ ಮಾರ್ಪಾಟನ್ನು ಮಾಡಬೇಕೆಂದು ಒಪ್ಪಿದರೆ ಅಥವಾ ಆ ನಿಯಮವನ್ನು ರದ್ದುಗೊಳಿಸಬೇಕೆಂದು ಒಪ್ಪಿದರೆ, ಆ ನಿಯಮವು, ಆ ಮಾರ್ಪಾಟನ್ನು ಅಥವಾ ರದ್ಧತಿಯನ್ನು ಅಧಿಸೂಚಿಸಿದಂಥ ದಿನಾಂಕದಿಂದ ಸಂದರ್ಭಾನುಸಾರ ಹಾಗೆ ಮಾರ್ಪಾಟಾದ ರೂಪದಲ್ಲಿ ಮಾತ್ರ ಜಾರಿಗೊಳ್ಳತಕ್ಕದ್ದು ಅಥವಾ ರದ್ದಾಗತಕ್ಕದ್ದು; ಆದಾಗ್ಯೂ, ಅಂಥ ಯಾವುದೇ ಮಾರ್ಪಾಟು ಅಥವಾ ರದ್ಧತಿಯು ಆ ನಿಯಮದ ಅಡಿಯಲ್ಲಿ ಈ ಹಿಂದೆ ಮಾಡಿದ ಯಾವುದೇ ಕಾರ್ಯದ ಸಿಂಧುತ್ವಕ್ಕೆ ಪ್ರತಿಕೂಲವಾಗಿರತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಬಿ. ಗುಂಜಿಗಾವಿ**
ಸರ್ಕಾರದ ಕಾರ್ಯದರ್ಶಿ
ಸಂಸದೀಯ ವ್ಯವಹಾರಗಳ ಇಲಾಖೆ

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ8) (750 ಪ್ರತಿಗಳು)

***RNI No. KARBIL/2001/47147***

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ರಾಜ್ಯ ಪತ್ರಿಕೆ


| | | |
|---|---|---|
| ಭಾಗ– ***IV-A*** | **ಬೆಂಗಳೂರು, ಗುರುವಾರ, ಜೂನ್ ೦೪, ೨೦೧೫ (ಜ್ಯೇಷ್ಠ ೧೪, ಶಕ ವರ್ಷ ೧೯೩೭)** | **ನಂ. ೬೩೬** |
| ***Part– IV-A*** | ***Bengaluru, Thursday, June 04, 2015 (Jyeishta 14, Shaka Varsha 1937)*** | ***No. 636*** |


**ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಅಪಜೀ 52 ಇಎನ್‌ವಿ 2013 (ಭಾಗ–1), ಬೆಂಗಳೂರು, ದಿನಾಂಕ: 03.06.2015**

ಕರ್ನಾಟಕ ಸರೋವರ ಸಂರಕ್ಷಣೆ ಮತ್ತು ಅಭಿವೃದ್ಧಿ ಪ್ರಾಧಿಕಾರ ಅಧಿನಿಯಮ, 2014 (2015ರ ಕರ್ನಾಟಕ ಅಧಿನಿಯಮ ಸಂಖ್ಯೆ 10)ರ 1ನೇ ಪ್ರಕರಣ (2)ನೇ ಉಪ ಪ್ರಕರಣದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಮೂಲಕ ಸದರಿ ಅಧಿನಿಯಮವು ದಿನಾಂಕ: 05.06.2015 ರಿಂದ ಜಾರಿಗೆ ಬರತಕ್ಕದ್ದೆಂದು ಗೊತ್ತುಪಡಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ರಾಮಚಂದ್ರ**
ಸರ್ಕಾರದ ಕಾರ್ಯದರ್ಶಿ
(ಪರಿಸರ ಮತ್ತು ಜೀವಿಶಾಸ್ತ್ರ)
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

**FOREST, ECOLOGY AND ENVIRONMENT SECRETARIAT**

**NOTIFICATION**

**No: FEE 52 ENV 2013 (Part-1), Bengaluru, Dated: 03.06.2015**

In exercise of powers conferred under sub-section (2) of section 1 of the Karnataka Lake Conservation and Development Authority Act, 2014 (Karnataka Act No:10 of 2015), the Government of Karnataka hereby appoints the 5th June 2015 as the date on which the said Act shall come into force.

By order and in the name of Governor of Karnataka

**RAMACHANDRA**
Secretary to Government
(Ecology and Environment)
Forest, Ecology and Environment Department

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿಐ) (500 ಪ್ರತಿಗಳು)

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ



| ಭಾಗ– IV-A | ಬೆಂಗಳೂರು, ಶುಕ್ರವಾರ, ಜೂನ್ ೦೫, ೨೦೧೫ (ಜ್ಯೇಷ್ಠ ೧೫, ಶಕ ವರ್ಷ ೧೯೩೭) | ನಂ. ೬೩೮ |
|---|---|---|
| **Part– IV-A** | **Bengaluru, Friday, June 05, 2015 (Jyeishta 15, Shaka Varsha 1937)** | **No. 638** |



ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

ಅಧಿಸೂಚನೆ

**ಸಂಖ್ಯೆ: ಸಿಆಸುಇ 1 ಸೇಆನ್ಯಾ 2014, ಬೆಂಗಳೂರು, ದಿನಾಂಕ: 05.06.2015**

ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ, 1978ರ (1990ರ ಕರ್ನಾಟಕ ಅಧಿನಿಯಮ 14) 3ನೇ ಪ್ರಕರಣದ (1)ನೇ ಉಪಪ್ರಕರಣವನ್ನು 8ನೇ ಪ್ರಕರಣದೊಡನೆ ಓದಿಕೊಂಡಂತೆ ಇದರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಕರ್ನಾಟಕ ಆಡಳಿತ ನ್ಯಾಯಮಂಡಳಿ (ನೇಮಕಾತಿ) ನಿಯಮಗಳು, 1993ಕ್ಕೆ ಮತ್ತಷ್ಟು ತಿದ್ದುಪಡಿ ಮಾಡಲು ಉದ್ದೇಶಿಸಿದ್ದು, ಸದರಿ ಅಧಿನಿಯಮದ 3ನೇ ಪ್ರಕರಣದ (2)ನೇ ಉಪ–ಪ್ರಕರಣದ (ಎ) ಖಂಡದ ಮೂಲಕ ಅಗತ್ಯಪಡಿಸಲಾದಂತೆ ಸದರಿ ಕರಡನ್ನು ಈ ಮೂಲಕ ಪ್ರಕಟಿಸಿ ಇದರಿಂದ ಬಾಧಿತರಾಗಬಹುದಾದಂಥ ಎಲ್ಲಾ ವ್ಯಕ್ತಿಗಳ ಗಮನಕ್ಕೆ ತರಲಾಗಿದೆ ಮತ್ತು ಸದರಿ ಕರಡು ನಿಯಮಗಳನ್ನು ಅವು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 15 ದಿನಗಳ ನಂತರ ಪರಿಗಣನೆಗೆ ತೆಗೆದುಕೊಳ್ಳಲಾಗುವುದೆಂದು ಈ ಮೂಲಕ ಸೂಚನೆ ನೀಡಿದೆ.

ಸದರಿ ಕರಡು ನಿಯಮಗಳಿಗೆ ಸಂಬಂಧಿಸಿದಂತೆ ಮೇಲೆ ನಿಗದಿಪಡಿಸಿದ ಅವಧಿಯು ಮುಕ್ತಾಯಗೊಳ್ಳುವ ಮೊದಲು ಸರ್ಕಾರದಲ್ಲಿ ಯಾವೊಬ್ಬ ವ್ಯಕ್ತಿಯಿಂದ ಸ್ವೀಕರಿಸಬಹುದಾದ ಯಾವುದೇ ಆಕ್ಷೇಪಣೆ ಮತ್ತು ಸಲಹೆಗಳನ್ನು ರಾಜ್ಯ ಸರ್ಕಾರವು ಪರಿಗಣಿಸುವುದು. ಆಕ್ಷೇಪಣೆ ಮತ್ತು ಸಲಹೆಗಳನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, ವಿಧಾನಸೌಧ, ಬೆಂಗಳೂರು–560 001 ಈ ವಿಳಾಸಕ್ಕೆ ಕಳುಹಿಸಬಹುದಾಗಿದೆ.

**ಕರಡು ನಿಯಮಗಳು**

1. **ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಕರ್ನಾಟಕ ಆಡಳಿತ ನ್ಯಾಯ ಮಂಡಳಿ (ನೇಮಕಾತಿ) (ತಿದ್ದುಪಡಿ) ನಿಯಮಗಳು, 2015 ಎಂದು ಕರೆಯತಕ್ಕದ್ದು.

(2) ಈ ನಿಯಮಗಳು ಅವು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಗೊಂಡ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

2. **ಅನುಸೂಚಿಯ ತಿದ್ದುಪಡಿ.–** ಕರ್ನಾಟಕ ಆಡಳಿತ ನ್ಯಾಯ ಮಂಡಳಿ (ನೇಮಕಾತಿ) ನಿಯಮಗಳು, 1993ರ ಅನುಸೂಚಿಯಲ್ಲಿ,–

(i) 'ಕಿರಿಯ ಸಹಾಯಕರ' ಹುದ್ದೆಯ ಪ್ರವರ್ಗಕ್ಕೆ ಸಂಬಂಧಿಸಿದ ಅಂಕಣಗಳಲ್ಲಿನ ನಮೂದುಗಳಿಗೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

| | | |
|---|---|---|
| ಕಿರಿಯ ಸಹಾಯಕರು (ರೂ.11600–21000) | ಕರ್ನಾಟಕ ನಾಗರೀಕ ಸೇವೆಗಳು(ಲಿಪಿಕ ಹುದ್ದೆಗಳಿಗೆ ನೇಮಕಾತಿ) ನಿಯಮಗಳು 1978ರ ಅನುಸಾರವಾಗಿ ನೇರ ನೇಮಕಾತಿಯ ಮೂಲಕ ಶೇಕಡ 67 ಮತ್ತು ಕರ್ನಾಟಕ ನಾಗರೀಕ ಸೇವೆಗಳು(ಲಿಪಿಕ ಹುದ್ದೆಗಳಿಗೆ ನೇಮಕಾತಿ) ನಿಯಮಗಳು 1978ರಲ್ಲಿ ಏನೇ ಒಳಗೊಂಡಿದ್ದರೂ ಚಾಲಕರ ವೃಂದದಲ್ಲಿನ ವ್ಯಕ್ತಿಗಳ ವರ್ಗಾವಣೆಯ ಮೂಲಕ ಶೇಕಡ 33 ಮತ್ತು 1:8ರ ಅನುಪಾತದಲ್ಲಿ ಗ್ರೂಪ್–ಡಿ ವೃಂದದಿಂದ ಬಡ್ತಿಯ ಮೂಲಕ ಪ್ರತಿ ಮೊದಲ ರಿಕ್ತ ಸ್ಥಾನವನ್ನು ಚಾಲಕರ ವರ್ಗಾವಣೆಯ ಮೂಲಕ ತುಂಬತಕ್ಕದ್ದು. | **ನೇರ ನೇಮಕಾತಿ/ವರ್ಗಾವಣೆ/ಬಡ್ತಿಗೆ :–** ಕರ್ನಾಟಕ ನಾಗರೀಕ ಸೇವೆಗಳು (ಲಿಪಿಕ ಹುದ್ದೆಗಳಿಗೆ ನೇಮಕಾತಿ) ನಿಯಮಗಳು 1978ರಲ್ಲಿ ನಿಯಮಿಸಲಾದಂತೆ. |

| | | |
|---|---|---|
| | ಗ್ರೂಪ್–ಡಿ ವೃಂದದ ಸಂಯೋಜಿತ ಜೇಷ್ಠತೆಯನ್ನು ಉನ್ನತ ವೇತನದ ಶ್ರೇಣಿಯನ್ನು ಹೊಂದಿರುವ ಹುದ್ದೆಯ ವ್ಯಕ್ತಿಯನ್ನು ವೇತನದ ಕಿರಿಯ ಶ್ರೇಣಿಯನ್ನು ಹೊಂದಿರುವ ಹುದ್ದೆಯ ವ್ಯಕ್ತಿಗಿಂತ ಹಿರಿಯವನೆಂದು ಭಾವಿಸುವ ಮೂಲಕ ನಿರ್ಧರಿಸತಕ್ಕದ್ದು.<br>ಸಮಾನ ವೇತನವನ್ನು ಹೊಂದಿರುವ ವ್ಯಕ್ತಿಗಳ ಪೈಕಿ ಪರಸ್ಪರ ಜೇಷ್ಠತೆಯನ್ನು ಸಂಬಂಧಪಟ್ಟ ವೃಂದಗಳಲ್ಲಿ ಸಲ್ಲಿಸಿದ ಸೇವಾವಧಿಯ ಆಧಾರದ ಮೇಲೆ ನಿರ್ಧರಿಸತಕ್ಕದ್ದು. ವೃಂದದಲ್ಲಿನ ವ್ಯಕ್ತಿಗಳ ಪೈಕಿ ಪರಸ್ಪರ ಜೇಷ್ಠತೆಯನ್ನು ನಿರ್ವಹಿಸಿರತಕ್ಕದ್ದು. | |

(ii) 'ಬೆರಳಚ್ಚುಗಾರ' ಹುದ್ದೆಯ ಪ್ರವರ್ಗಕ್ಕೆ ಸಂಬಂಧಿಸಿದ ನಮೂದುಗಳಲ್ಲಿ (2)ನೇ ಕಾಲಂ ನಮೂದುಗಳಿಗೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"ನೇರ ನೇಮಕಾತಿಯ ಮೂಲಕ ಶೇಕಡ ಐವತ್ತು ಮತ್ತು ಸಂಯೋಜಿತ ಜೇಷ್ಠತೆಯ ಆಧಾರದ ಮೇಲೆ ಗ್ರೂಪ್ ಡಿ ವೃಂದದಿಂದ ಬಡ್ತಿಯ ಮೂಲಕ ಶೇಕಡ ಐವತ್ತು. ಜೇಷ್ಠತೆಯನ್ನು ಉನ್ನತ ವೇತನದ ಶ್ರೇಣಿಯನ್ನು ಹೊಂದಿರುವ ಹುದ್ದೆಯ ವ್ಯಕ್ತಿಯನ್ನು ವೇತನದ ಕಿರಿಯ ಶ್ರೇಣಿಯನ್ನು ಹೊಂದಿರುವ ಹುದ್ದೆಯ ವ್ಯಕ್ತಿಗಿಂತ ಹಿರಿಯವನೆಂದು ಭಾವಿಸುವ ಮೂಲಕ ನಿರ್ಧರಿಸತಕ್ಕದ್ದು. ಸಮಾನ ವೇತನವನ್ನು ಹೊಂದಿರುವ ವ್ಯಕ್ತಿಗಳ ಪೈಕಿ ಪರಸ್ಪರ ಜೇಷ್ಠತೆಯನ್ನು ಸಂಬಂಧಪಟ್ಟ ವೃಂದಗಳಲ್ಲಿ ಸಲ್ಲಿಸಿದ ಸೇವಾವಧಿಯ ಆಧಾರದ ಮೇಲೆ ನಿರ್ಧರಿಸತಕ್ಕದ್ದು. ವೃಂದದಲ್ಲಿನ ವ್ಯಕ್ತಿಗಳ ಪೈಕಿ ಪರಸ್ಪರ ಜೇಷ್ಠತೆಯನ್ನು ನಿರ್ವಹಿಸಿರತಕ್ಕದ್ದು"

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಉಮಾ. ಕೆ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾನಿಯಮಗಳು–2)

**PERSONNEL AND ADMINISTRATIVE SECRETARIAT**
**NOTIFICATION**
**No. DPAR 1 SAT 2014, Bengaluru, dated: 05.06.2015**

The draft of the following rules further to amend the Karnataka Administrative Tribunal (Recruitment) Rules, 1993 which the Government of Karnataka proposes to make in exercise of the powers conferred by sub-section (1) of section 3 read with section 8 of Karnataka State Civil Services Act, 1978 (Karnataka Act 14 of 1990) is hereby published as required by clause (a) of sub-section (2) of section 3 of the said Act, for the information of persons likely to be affected thereby and notice is hereby given that the said draft will be taken into consideration after fifteen days from the date of its publication in the Official Gazette.

Any objection or suggestion which may be received by the State Government from any person with respect to the said draft before the expiry of the period specified above will be considered by the State Government. Objections and Suggestions may be addressed to the Principal Secretary to Government, Department of Personnel and Administrative Reforms, Vidhana Soudha, Bangalore-560 001.

**DRAFT RULES**

**1. Title and commencement.-** (1) These rules may be called the Karnataka Administrative Tribunal (Recruitment) (Amendment) Rules, 2015.

(2) They shall come into force from the date of their publication in the Official Gazette.

**2. Amendment of the schedule.-** In the Karnataka Administrative Tribunal (Recruitment) Rules, 1993, in the schedule,-

(i) for the entries relating to the category of post of 'Junior Assistant', the following shall be substituted, namely:-

| | | |
|---|---|---|
| Junior Assistant (Rs.11600-21000) | Sixty seven percent by direct recruitment in accordance with the Karnataka Civil Services (Recruitment to Ministerial Posts) Rules, 1978; and<br><br>Notwithstanding anything contained in the Karnataka Civil Services | **For Direct Recruitment/ Transfer/Promotion:-**<br>As prescribed in the Karnataka Civil Services (Recruitment to Ministerial Posts) Rules, 1978. |

| | | |
|---|---|---|
| | (Recruitment to Ministerial Posts) Rules, 1978, thirty three percent by transfer of persons in the cadre of drivers and by promotion from Group-D cadres in the ratio of 1:8. Every 1st vacancy shall be filled by transfer of Drivers.<br><br>The combined seniority of Group-D cadre shall be determined by treating a person holding a post carrying higher scale of pay as senior to a person holding a post carrying lower scale of pay. Seniority interse among persons in a cadre carrying same scale of pay being determined on the basis of length of service in the respective cadres. Seniority inter-se among persons in a cadre being maintained. | |

(ii) in the entries relating to the category of post of '**Typist**', for entries in column (2), the following shall be substituted, namely:-

"Fifty percent by direct Recruitment and fifty percent by promotion from Group D cadres on the basis of combined seniority. Seniority being determined by treating a person holding a post carrying higher scale of pay as senior to a person holding a post carrying lower scale of pay. Seniority interse among persons in a cadre carrying same scale of pay being determined on the length of service in the respective cadres. Seniority inter-se among persons in a cadre being maintained."

By orders and in the name of Governor of Karnataka

**Uma K.**
Under Secretary to Government,
Department of Personnel and Administrative
Reforms (Service Rules-2)

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ8) (150 ಪ್ರತಿಗಳು)

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ


| ಭಾಗ– *IV-A* | ಬೆಂಗಳೂರು, ಶುಕ್ರವಾರ, ಜೂನ್ ೦೫, ೨೦೧೫ (ಜ್ಯೇಷ್ಠ ೧೫, ಶಕ ವರ್ಷ ೧೯೩೭) | ನಂ. ೬೩೯ |
|---|---|---|
| ***Part– IV-A*** | ***Bengaluru, Friday, June 05, 2015 (Jyeishta 15, Shaka Varsha 1937)*** | ***No. 639*** |


ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

ಅಧಿಸೂಚನೆ

**ಸಂ. ಡಿಪಿಎಆರ್ 235 ಎಸ್‌ಆರ್‌ಆರ್ 2013, ಬೆಂಗಳೂರು, ದಿನಾಂಕ: 24.11.2014**

ಕರ್ನಾಟಕ ಗೆಜೆಟೆಡ್ ಪ್ರೋಬೇಷನರುಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು, 1997ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳ ಕರಡನ್ನು, ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ, 1978 (1990ರ ಕರ್ನಾಟಕ ಅಧಿನಿಯಮ 14)ರ 8ನೇ ಪ್ರಕರಣದೊಂದಿಗೆ ಓದಲಾದ 3ನೇ ಪ್ರಕರಣದ (2)ನೇ ಉಪ–ಪ್ರಕರಣದ(ಎ) ಖಂಡದಿಂದ ಅಗತ್ಯಪಡಿಸಲಾದಂತೆ, ಕರ್ನಾಟಕ ರಾಜ್ಯ ಪತ್ರದ ಭಾಗ IV-A (ಸಂಪುಟ 148) ರಲ್ಲಿ ಪ್ರಕಟವಾದ ಅಧಿಸೂಚನೆ ಸಂಖ್ಯೆ:ಡಿಪಿಎಆರ್ 235 ಎಸ್‌ಆರ್‌ಆರ್ 2013, ದಿನಾಂಕ: 30.09.2014ನ್ನು ಅಧಿಕೃತವಾಗಿ ರಾಜ್ಯ ಪತ್ರದಲ್ಲಿ ಕರಡನ್ನು ಪ್ರಕಟಿಸಿದ ದಿನಾಂಕ:30.9.2014 ರಿಂದ 15 ದಿನಗಳೊಳಗೆ ಇದರಿಂದ ಬಾಧಿತರಾಗಬಹುದಾದ ವ್ಯಕ್ತಿಗಳಿಂದ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ಆಹ್ವಾನಿಸಿ ಪ್ರಕಟಿಸಿರುವುದರಿಂದ;

ಸದರಿ ರಾಜ್ಯ ಪತ್ರವನ್ನು ದಿನಾಂಕ: 30.09.2014 ರಿಂದ ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು ಸ್ವೀಕರಿಸಿದ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ರಾಜ್ಯಸರ್ಕಾರವು ಪರಿಗಣಿಸಲಾಗಿರುವುದರಿಂದ;

ಆದ್ದರಿಂದ, ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ, 1978ರ (1990ರ ಕರ್ನಾಟಕ ಅಧಿನಿಯಮ 14) 8ನೇ ಪ್ರಕರಣದೊಂದಿಗೆ ಓದಲಾದ 3ನೇ ಪ್ರಕರಣದ (1)ನೇ ಉಪ–ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮೂಲಕ ಕೆಳಕಂಡ ನಿಯಮಗಳನ್ನು ರಚಿಸುತ್ತದೆ, ಎಂದರೆ:–

**ನಿಯಮಗಳು**

1. **ಹೆಸರು ಮತ್ತು ಪ್ರಾರಂಭ.**–(1) ಈ ನಿಯಮಗಳನ್ನು, ಕರ್ನಾಟಕ ಗೆಜೆಟೆಡ್ ಪ್ರೋಬೇಷನರುಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) (11ನೇ ತಿದ್ದುಪಡಿ) ನಿಯಮಗಳು, 2014 ಎಂದು ಕರೆಯತಕ್ಕದ್ದು.

(2) ಅವು ಅಧಿಕೃತ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನಾಂಕದಿಂದ ಅವುಗಳು ಜಾರಿಗೆ ಬರತಕ್ಕದ್ದು.

2. **6ನೇ ನಿಯಮದ ತಿದ್ದುಪಡಿ.**–ಕರ್ನಾಟಕ ಗೆಜೆಟೆಡ್ ಪ್ರೊಬೇಷನರುಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕಾತಿ) ನಿಯಮಗಳು, 1997 ರಲ್ಲಿ (ಇದರಲ್ಲಿ ಇನ್ನು ಮುಂದೆ ಸದರಿ ನಿಯಮಗಳೆಂದು ಉಲ್ಲೇಖಿಸಿದೆ) 6ನೇ ನಿಯಮದಲ್ಲಿ ಕೆಳಗಿನ ಪರಂತುಕದ ಕೊನೆಯಲ್ಲಿ ಸೇರಿಸತಕ್ಕದ್ದು, ಎಂದರೆ:–

"ಒದಗಿಸಲಾದ 2014 ಅಥವಾ 2015ನೇ ಸಾಲಿನಲ್ಲಿ 452 ಖಾಲಿ ಹುದ್ದೆಗಳಿಗೆ ಹೊರಡಿಸುವ ಅಧಿಸೂಚನೆಗೆ ಸಂಬಂಧಿಸಿದಂತೆ ಮತ್ತು ಮುಂದಿನ ನಿಕಟಪೂರ್ವ ನೇಮಕಾತಿಗೆ ಹೊರಡಿಸಿರುವ ನಂತರದ ಅಧಿಸೂಚನೆಗಳಿಗೆ ಅನ್ಯಥಾ ಅರ್ಹತೆಯನ್ನು ಹೊಂದಿರುವಂಥ ಅಭ್ಯರ್ಥಿಗಳು ಎರಡಕ್ಕಿಂತ ಹೆಚ್ಚು ಮತ್ತು ಅದಕ್ಕೂ ಮೇಲ್ಪಟ್ಟು, ಹೆಚ್ಚು ಸಂಖ್ಯೆಯ ಅರ್ಹತಾ ಪ್ರಯತ್ನಗಳಿಗೆ ಅನುಮತಿ ನೀಡತಕ್ಕದ್ದು."

3. **IIನೇ ಅನುಸೂಚಿಯ ತಿದ್ದುಪಡಿ**: IIನೇ ಅನುಸೂಚಿಯಲ್ಲಿನ ಸದರಿ ನಿಯಮಗಳಿಗೆ,

(i) **Iನೇ ಪ್ರಕರಣದ** ಮೇರೆಗೆ, **ಭಾಗ–ಬಿಯ** ಉಪ ಶೀರ್ಷಿಕೆಗೆ ಅವುಗಳಿಗೆ ಸಂಬಂಧಿಸಿದ ನಮೂದುಗಳನ್ನು ಕೆಳಗಿನಂತೆ ಬದಲಿಯಾಗಿ ಸೇರಿಸತಕ್ಕದ್ದು. ಎಂದರೆ:–

ಮುಖ್ಯ ಪರೀಕ್ಷೆಯ ಲಿಖಿತ ಪರೀಕ್ಷೆ ಮತ್ತು ವ್ಯಕ್ತಿತ್ವ ಪರೀಕ್ಷೆಯನ್ನು ಒಳಗೊಂಡಿರತಕ್ಕದ್ದು.

**ಲಿಖಿತ ಪರೀಕ್ಷೆ:**

| | | | |
|---|---|---|---|
| ಅರ್ಹತಾ ಪತ್ರಿಕೆಗಳು | ಕನ್ನಡ | 150 ಅಂಕಗಳು | 2 ಗಂಟೆಗಳು |
| | ಇಂಗ್ಲೀಷ್ | 150 ಅಂಕಗಳು | 2 ಗಂಟೆಗಳು |

| | | | | |
|---|---|---|---|---|
| ಕಡ್ಡಾಯ ಪತ್ರಿಕೆಗಳು | ಪತ್ರಿಕೆ–I | ಪ್ರಬಂಧ | 250 ಅಂಕಗಳು | 3 ಗಂಟೆಗಳು |
| | ಪತ್ರಿಕೆ–II | ಸಾಮಾನ್ಯ ಅಧ್ಯಯನ–1 | 250 ಅಂಕಗಳು | 3 ಗಂಟೆಗಳು |
| | ಪತ್ರಿಕೆ–III | ಸಾಮಾನ್ಯ ಅಧ್ಯಯನ–2 | 250 ಅಂಕಗಳು | 3 ಗಂಟೆಗಳು |
| | ಪತ್ರಿಕೆ–IV | ಸಾಮಾನ್ಯ ಅಧ್ಯಯನ–3 | 250 ಅಂಕಗಳು | 3 ಗಂಟೆಗಳು |
| | ಪತ್ರಿಕೆ–V | ಸಾಮಾನ್ಯ ಅಧ್ಯಯನ–4 | 250 ಅಂಕಗಳು | 3 ಗಂಟೆಗಳು |
| | ಪತ್ರಿಕೆ–VI | ಐಚ್ಛಿಕ ವಿಷಯ ಪತ್ರಿಕೆ–I | 250 ಅಂಕಗಳು | 3 ಗಂಟೆಗಳು |
| | ಪತ್ರಿಕೆ–VII | ಐಚ್ಛಿಕ ವಿಷಯ ಪತ್ರಿಕೆ–2 | 250 ಅಂಕಗಳು | 3 ಗಂಟೆಗಳು |
| ಲಿಖಿತ ಪರೀಕ್ಷೆಗೆ ಒಟ್ಟು ಅಂಕಗಳು | | | 1750 ಅಂಕಗಳು | |

**ಸೂಚನೆ:1**. ಅರ್ಹತಾ ಪತ್ರಿಕೆಗಳು ಎಂದರೆ, ಕನ್ನಡ ಮತ್ತು ಇಂಗ್ಲೀಷ್‌ನಲ್ಲಿ ಅರ್ಹತಾ ಪತ್ರಿಕೆಗಳಲ್ಲಿ ಪಡೆದ ಅಂಕಗಳು ಅರ್ಹತಾ ಸ್ವರೂಪದ್ದಾಗಿರತಕ್ಕದ್ದು. ಈ ಪತ್ರಿಕೆಗಳಲ್ಲಿ ಅರ್ಹತೆಗಾಗಿ ಪ್ರತಿಯೊಂದು ಪತ್ರಿಕೆಯಲ್ಲಿ ಕನಿಷ್ಠ 35% ಎಂದು ನಿಗಧಿಡಿಸಿದೆ. ಈ ಎರಡು ಪತ್ರಿಕೆಗಳಲ್ಲಿ ಪಡೆದ ಅಂಕಗಳನ್ನು ಆಯ್ಕೆಗಾಗಿ ಮೆರಿಟ್‌ನ್ನು ನಿರ್ಧರಿಸುವುದಕ್ಕಾಗಿ ಪರಿಗಣಿಸತಕ್ಕದ್ದಲ್ಲ. ಅರ್ಹತಾ ಪರೀಕ್ಷೆಗಳು ಎಂದರೆ, ಕನ್ನಡ ಮತ್ತು ಇಂಗ್ಲೀಷ್‌ನಲ್ಲಿ ನಿಗದಿಪಡಿಸಿದ ಕನಿಷ್ಠ ಅಂಕಗಳನ್ನು ಪಡೆಯದೆ ಇರುವಂಥ ಅಭ್ಯರ್ಥಿಗಳು ವ್ಯಕ್ತಿತ್ವ ಪರೀಕ್ಷೆಗೆ ಮತ್ತು ಆಯ್ಕೆಗೆ ಅರ್ಹರಾಗತಕ್ಕದ್ದಲ್ಲ.

2. ಪರೀಕ್ಷೆಯು, ಸಾಂಪ್ರದಾಯಿಕವಾದ ವಿವರಣಾತ್ಮಕ ರೀತಿಯ ಸ್ವರೂಪದ್ದಾಗಿರತಕ್ಕದ್ದು ಮತ್ತು ಎಲ್ಲಾ ಪತ್ರಿಕೆಗಳು ಕಡ್ಡಾಯವಾಗಿರತಕ್ಕದ್ದು.

3. ಪ್ರಶ್ನೆಪತ್ರಿಕೆಗಳು ಕನ್ನಡ ಮತ್ತು ಇಂಗ್ಲೀಷ್ ಎರಡೂ ಭಾಷೆಯಲ್ಲಿ ಸಿದ್ಧಗೊಂಡಿರುತ್ತವೆ. ಅಭ್ಯರ್ಥಿಯು ಪತ್ರಿಕೆಯನ್ನು ಸಂಪೂರ್ಣವಾಗಿ ಕನ್ನಡದಲ್ಲಾಗಲಿ ಮತ್ತು ಇಂಗ್ಲೀಷ್‌ನಲ್ಲಾಗಲಿ ಉತ್ತರಿಸಬಹುದು.

4. ಮುಖ್ಯಪರೀಕ್ಷೆಯ ಪತ್ರಿಕೆ–I ಕನ್ನಡ ಮತ್ತು ಪತ್ರಿಕೆ–II ಇಂಗ್ಲೀಷ್‌ನ್ನು ಹೊರತುಪಡಿಸಿ ಮುಖ್ಯ ಪರೀಕ್ಷೆಯ ಮಟ್ಟವು ಪದವಿಯ ಹಂತದಲ್ಲಿರುತ್ತದೆ. ಪತ್ರಿಕೆ–I ಕನ್ನಡ ಮತ್ತು ಪತ್ರಿಕೆ–II ಇಂಗ್ಲೀಷ್ ಮಟ್ಟವು ಮೊದಲ ಭಾಷೆ ಕನ್ನಡ ಮತ್ತು ಮೊದಲ ಭಾಷೆ ಇಂಗ್ಲಿಷ್ ಅನುಕ್ರಮವಾಗಿ ಎಸ್.ಎಸ್.ಎಲ್.ಸಿ ಹಂತದಲ್ಲಿರುತ್ತವೆ.

5. ಎಲ್ಲಾ ಏಳು ಪತ್ರಿಕೆಗಳು ಕಡ್ಡಾಯವಾಗಿರುವವು. ಪತ್ರಿಕೆ– IIರಿಂದ V ನೇ ಪತ್ರಿಕೆ ಮೂರು ವಿಭಾಗಗಳನ್ನು ಒಳಗೊಂಡಿರುತ್ತದೆ. ಪ್ರತಿಯೊಂದು ಪತ್ರಿಕೆ ಗರಿಷ್ಠ 250 ಅಂಕಗಳನ್ನು ಒಳಗೊಂಡಿರುವುದು ಮತ್ತು ಮೂರು ಗಂಟೆಗಳ ಕಾಲಾವಧಿ ಮಾತ್ರ ಇರುತ್ತದೆ.

6. ಲಿಖಿತ ಮತ್ತು ಮೌಖಿಕ ಪರೀಕ್ಷೆ ಅಂಕಗಳನ್ನು ಅಂತಿಮ ಆಯ್ಕೆ ಪಟ್ಟಿಯೊಂದಿಗೆ ಪ್ರಕಟಿಸಲಾಗುವುದು.

ಸಿ. **ವ್ಯಕ್ತಿತ್ವ ಪರೀಕ್ಷೆ**:–ಆತ/ಆಕೆಯು ಮುಖ್ಯ ಪರೀಕ್ಷೆಯಲ್ಲಿ ಪಡೆದ ಅಂಕಗಳನ್ನು ಹೊರತುಪಡಿಸಿ, ಅವರ ಮುಂದೆ ದಾಖಲೆಗಳನ್ನು ಹಾಜರುಪಡಿಸಲಾಗುವ ಆ ಅಭ್ಯರ್ಥಿಯನ್ನು ಮಂಡಳಿಯು ಸಂದರ್ಶನ ನಡೆಸುತ್ತದೆ. ಆತ/ಆಕೆಯನ್ನು ಸಾಮಾನ್ಯ ಆಸಕ್ತಿಗಳ ವಿಷಯಗಳಿಗೆ ಸಂಬಂಧಿಸಿದ ಪ್ರಶ್ನೆಗಳನ್ನು ಕೇಳಲಾಗುವುದು. ಸಂದರ್ಶನ ಉದ್ದೇಶ ಸಕ್ಷಮ ಮಂಡಳಿಯು ಮತ್ತು ವೀಕ್ಷಕರು, ನಿಷ್ಪಕ್ಷಪಾತವಾಗಿ ಸಾರ್ವಜನಿಕ ಸೇವೆಗಳ ನಿರ್ವಹಣೆಗೆ ಅಭ್ಯರ್ಥಿಯ ವೈಯಕ್ತಿಕ ಅರ್ಹತೆಯನ್ನು ನಿರ್ವಹಿಸುವುದಾಗಿದೆ, ಪರೀಕ್ಷೆಯು, ಅಭ್ಯರ್ಥಿಯ ಮಾನಸಿಕ ಸಾಮರ್ಥ್ಯವನ್ನು ನಿರ್ಣಯಿಸಲು ಉದ್ದೇಶಿಸಲಾಗಿದೆ.ಸ್ಥೂಲವಾಗಿ ಆತ/ಆಕೆಯ ಬೌದ್ಧಿಕ ಅರ್ಹತೆಗಳನ್ನು ಮಾತ್ರವಲ್ಲದೆ ವಾಸ್ತವಿಕತೆಯನ್ನು ನಿರ್ಧರಿಸುವುದಾಗಿದೆ. ನಿರ್ಧರಿಸುವ ಕೆಲವು ಅರ್ಹತೆಗಳು ಮಾನಸಿಕವಾಗಿ ಜಾಗರೂಕತೆ, ಹೊಂದಾಣಿಕೆಯ ಸಂಧಿಗ್ಧ ಅಧಿಕಾರಗಳು, ಸ್ಪಷ್ಟತೆ ಮತ್ತು ತಾರ್ಕಿಕ ನಿರೂಪಣೆ, ಸರಿ ಹೊಂದುವ ನಿರ್ಣಯಗಳು ವಿಭಿನ್ನ ಆಸಕ್ತಿ, ಗಾಢತೆ, ಸಾಮಾಜಿಕ ಒಗ್ಗಟ್ಟು ಮತ್ತು ನಾಯಕತ್ವ, ಬೌದ್ಧಿಕ ಹಾಗೂ ನೈತಿಕ ದೃಢ ನಿಷ್ಠೆಯಾಗಿರುವುದು, ಸಂದರ್ಶನ ಕೌಶಲವು ಕಟ್ಟುನಿಟ್ಟಾದ ಪಾಟೀ ಸವಾಲು ಆಗಿರುವುದಿಲ್ಲ. ಆದರೆ, ಸಹಜವಾದುದಾಗಿರುತ್ತದೆ. ಪ್ರತ್ಯಕ್ಷವಾಗಿ ಮತ್ತು ಉದ್ದೇಶಿತ ಚರ್ಚೆ ಇದ್ದಾಗ್ಯೂ ಅಭ್ಯರ್ಥಿಯ ಮಾನಸಿಕ ಸಾಮರ್ಥ್ಯವನ್ನು ವ್ಯಕ್ತಪಡಿಸುವ ಉದ್ದೇಶವಾಗಿದೆ.ಸಂದರ್ಶನ ಪರೀಕ್ಷೆಯು ಅಭ್ಯರ್ಥಿಯ ವಿಶಿಷ್ಟತೆ ಅಥವಾ ಸಾಮಾನ್ಯ ಜ್ಞಾನವನ್ನಾಗಲಿ ಪರೀಕ್ಷಿಸುವ ಉದ್ದೇಶವಲ್ಲ. ಅದನ್ನು ಈಗಾಗಲೇ ಲಿಖಿತ ಪರೀಕ್ಷೆಗಳ ಮೂಲಕ ಪರೀಕ್ಷಿಸಿರುವುದಾಗಿರುತ್ತದೆ. ಅಭ್ಯರ್ಥಿಗಳು ಅವರ ಶೈಕ್ಷಣಿಕ ಅಧ್ಯಯನಕ್ಕೆ ಸಂಬಂಧಿಸಿದಂತೆ ವಿಶೇಷ ವಿಷಯಗಳಲ್ಲಿ ಆಸಕ್ತಿವಹಿಸುವುದು ಮಾತ್ರವಲ್ಲದೆ ಉತ್ತಮ ಶಿಕ್ಷಣ ಯುವಕರ ಕೌತುಕವನ್ನು ಕೆರಳಿಸುವಂತಹ ಘಟನೆಗಳು, ಅವರ ಸುತ್ತಮುತ್ತ ನಡೆಯುತ್ತಿರುವ ರಾಜ್ಯದ ಅಥವಾ ದೇಶದ ಒಳಗಿನ ಹಾಗೂ ಹೊರಗಿನ ಘಟನೆಗಳು ಬಗ್ಗೆ ಹಾಗೂ ಆಧುನಿಕ ಚಿಂತನೆಗಳು ಮತ್ತು ಹೊಸ ಅನ್ವೇಷಣೆಗಳ ಬಗ್ಗೆ ಆಸಕ್ತಿವಹಿಸಬೇಕಾಗುತ್ತದೆ.

ಆಯೋಗವು ಸಂದರ್ಭಾನುಸಾರ ಗ್ರೂಪ್–ಎ ಮತ್ತು ಗ್ರೂಪ್–ಬಿ ನ ಸೇವೆಗಳಲ್ಲಿ ಖಾಲಿ ಇರುವ ಹುದ್ದೆಗಳ ಅಭ್ಯರ್ಥಿಗಳ ಸಂಖ್ಯೆಗೆ ಅನುಗುಣವಾಗಿ ಮೂರರಷ್ಟು ಅಭ್ಯರ್ಥಿಗಳನ್ನು ವ್ಯಕ್ತಿತ್ವ ಪರೀಕ್ಷೆಗೆ ಆಹ್ವಾನಿಸತಕ್ಕದ್ದು. ಪರಿಶಿಷ್ಟ ಜಾತಿಗಳು, ಪರಿಶಿಷ್ಟ ಪಂಗಡಗಳು ಮತ್ತು ಇತರೆ ಹಿಂದುಳಿದ ವರ್ಗಗಳಿಗೆ ಮೀಸಲಾತಿಯನ್ನು ಖಚಿತಪಡಿಸಿಕೊಂಡು, ಖಾಲಿ ಹುದ್ದೆಗಳ ಅನುಪಾತದ

ಆಧಾರದಲ್ಲಿ ಮುಖ್ಯ ಪರೀಕ್ಷೆಯ ಫಲಿತಾಂಶದ ಆಧಾರದ ಮೇಲೆ ಮೆರಿಟ್ ಕ್ರಮನುಸಾರ ಅಭ್ಯರ್ಥಿಗಳನ್ನು ವ್ಯಕ್ತಿತ್ವ ಪರೀಕ್ಷೆಗೆ ಆಹ್ವಾನಿಸುವುದು. ವ್ಯಕ್ತಿತ್ವ ಪರೀಕ್ಷೆಯನ್ನು ಗರಿಷ್ಠ 200 ಅಂಕಗಳಿಗೆ ನಡೆಸತಕ್ಕದ್ದು.

(ii) **IIನೇಪ್ರಕರಣದ** ಮೇರೆಗೆ**ಭಾಗ–ಬಿ** ಯ ಉಪ–ಶೀರ್ಷಿಕೆಯ ಅಡಿಯಲ್ಲಿ ಮುಖ್ಯ ಪರೀಕ್ಷೆಗೆ, ಅದಕ್ಕೆ ಸಂಬಂಧಿಸಿದ ನಮೂದುಗಳನ್ನು ಈ ಕೆಳಗಿನಂತೆ ಬದಲಿಯಾಗಿ ಸೇರಿಸತಕ್ಕದ್ದು, ಎಂದರೆ:–

| | | | |
|---|---|---|---|
| ಅರ್ಹತಾ ಪತ್ರಿಕೆಗಳು | ಕನ್ನಡ | 150 ಅಂಕಗಳು | 2 ಗಂಟೆಗಳು |
| | ಇಂಗ್ಲೀಷ್ | 150 ಅಂಕಗಳು | 2 ಗಂಟೆಗಳು |

| **ಪತ್ರಿಕೆಗಳು** | **ವಿಭಾಗಗಳ ಸಂಖ್ಯೆ ಕನ್ನಡ/ಇಂಗ್ಲೀಷ್** | **ಪ್ರತಿ ವಿಭಾಗದ ಒಟ್ಟು ಅಂಕಗಳು** | **ಪ್ರತಿ ಪತ್ರಿಕೆಯ ಒಟ್ಟು ಅಂಕಗಳು** | |
|---|---|---|---|---|
| **ಪತ್ರಿಕೆ–I:ಪ್ರಬಂಧಗಳು,**<br>ಎರಡು ಪ್ರಬಂಧಗಳು (ಕನ್ನಡ/ಇಂಗ್ಲೀಷ್‌ನಲ್ಲಿ)<br>**ಪ್ರಬಂಧ–1**: ರಾಷ್ಟ್ರೀಯ / ಅಂತರಾಷ್ಟ್ರೀಯ ಮಹತ್ವ ವಿಷಯ.<br>**ಪ್ರಬಂಧ–2**: ರಾಜ್ಯ ಮಹತ್ವ / ಸ್ಥಳೀಯ ಮಹತ್ವ ವಿಷಯ | ಎರಡು ಪ್ರಬಂಧಗಳು | ಪ್ರತಿ ಪ್ರಬಂಧ 125 ಅಂಕ | 250 | 3 ಗಂಟೆಗಳು |
| **ಪ್ರತಿಕೆ–II:ಸಾಮಾನ್ಯ ಅಧ್ಯಯನಗಳು 1**<br>1. ಇತಿಹಾಸ ಮತ್ತು ಸಾಂಸ್ಕೃತಿಕ ಪರಂಪರೆ (ಭಾರತ ಮತ್ತು ಕರ್ನಾಟಕ)<br>2. ಸಾಮಾಜಿಕ ಮತ್ತು ರಾಜಕೀಯ ದೃಷ್ಠಿಕೋನ<br>3. ಭಾರತದ ಅರ್ಥವ್ಯವಸ್ಥೆ– ಯೋಜನೆ, ಗ್ರಾಮೀಣ ಅಭಿವೃದ್ಧಿ, ದತ್ತಾಂಶ ಸಂಗ್ರಹಣೆಗಳ ವಿಶ್ಲೇಷಣೆ, ಅರ್ಥವಿವರಣೆ | ಮೂರು ವಿಭಾಗಗಳು | 80/85 | 250 | ಅದೇ |
| **ಪ್ರತಿಕೆ–IIIಸಾಮಾನ್ಯ ಅಧ್ಯಯನಗಳು 2**<br>1. ಭೌತಿಕ ಲಕ್ಷಣಗಳು ಮತ್ತು ಸ್ವಾಭಾವಿಕ ಸಂಪನ್ಮೂಲಗಳು<br>2. ಭಾರತ ಸಂವಿಧಾನದ ಸ್ಥೂಲ ಸಮೀಕ್ಷೆ<br>3. ಸಾರ್ವಜನಿಕ ಆಡಳಿತ ಮತ್ತು ನಿರ್ವಹಣೆ, ಅಂತರಾಷ್ಟ್ರೀಯ ಸಂಬಂಧಗಳು | ಮೂರು ವಿಭಾಗಗಳು | 80/85 | 250 | 3 ಗಂಟೆಗಳು |
| **ಪ್ರತಿಕೆ–IVಸಾಮಾನ್ಯ ಅಧ್ಯಯನಗಳು 3**<br>1. ಭಾರತದ ಅಭಿವೃದ್ಧಿಯಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನದ ಪಾತ್ರ ಮತ್ತು ಪ್ರಭಾವ ಸಾರ್ವಜನಿಕ ವಲಯದಲ್ಲಿ ಮಾಹಿತಿ ತಂತ್ರಜ್ಞಾನ<br>2. ಸ್ವಾಭಾವಿಕ ವಿಜ್ಞಾನ, ಜೀವ ವಿಜ್ಞಾನ, ಕೃಷಿ ವಿಜ್ಞಾನದ ಆರೋಗ್ಯ ಮತ್ತು ನೈರ್ಮಲ್ಯದಲ್ಲಿ ಮುಂದುವರೆದ ಮತ್ತು ಆಧುನಿಕ ಪ್ರವೃತ್ತಿಗಳು<br>3. ಪರಿಸರ ಮತ್ತು ಜೀವ ಪರಿಸರಶಾಸ್ತ್ರದ ಅಭಿವೃದ್ಧಿಯ ವಿದ್ಯಾಮಾನಗಳು/ಸವಾಲುಗಳು. | ಮೂರು ವಿಭಾಗಗಳು | 80/85 | 250 | ಅದೇ |
| **ಪ್ರತಿಕೆ–Vಸಾಮಾನ್ಯ ಅಧ್ಯಯನಗಳು 4**<br>1. ನೀತಿಶಾಸ್ತ್ರ<br>2. ಸಮಗ್ರತೆ<br>3. ಕೌಶಲ್ಯ | ಮೂರು ವಿಭಾಗಗಳು | 80/85 | 250 | ಅದೇ |

| ಪತ್ರಿಕೆಗಳು | | ವಿಭಾಗಗಳ ಸಂಖ್ಯೆ ಕನ್ನಡ/ಇಂಗ್ಲೀಷ್ | ಪ್ರತಿ ವಿಭಾಗದ ಒಟ್ಟು ಅಂಕಗಳು | ಪ್ರತಿ ಪತ್ರಿಕೆಯ ಒಟ್ಟು ಅಂಕಗಳು | |
|---|---|---|---|---|---|
| ಪ್ರತಿಕೆ–VI | ವಿಷಯ ಪತ್ರಿಕೆ –1 | – | – | 250 | ಅದೇ |
| ಪ್ರತಿಕೆ–VII | ವಿಷಯ ಪತ್ರಿಕೆ –2 | – | – | 250 | ಅದೇ |
| ಒಟ್ಟು | | – | – | 1750 | |
| ವ್ಯಕ್ತಿತ್ವ ಪರೀಕ್ಷೆ | | | | 200 | |
| | | ಒಟ್ಟು ಅಂಕಗಳು | | **1950** | |

***ಅರ್ಹತಾ ಪತ್ರಿಕೆ ಕನ್ನಡ***

ಈ ಪತ್ರಿಕೆಯ ಗುರಿ, ಅಭ್ಯರ್ಥಿಗಳು ಗಂಭೀರವಾದ ತಾರ್ಕಿಕ ಗದ್ಯವನ್ನು ಓದಲು ಮತ್ತು ಅರ್ಥಮಾಡಿಕೊಳ್ಳುವುದು ಮತ್ತು ತನ್ನ ವಿಚಾರಗಳನ್ನು ಕನ್ನಡದಲ್ಲಿ ಸ್ಪಷ್ಟವಾಗಿ ಮತ್ತು ಸರಿಯಾಗಿ ವ್ಯಕ್ತಪಡಿಸುವ ಪರೀಕ್ಷೆಯಾಗಿರುವುದು.
ಪ್ರಶ್ನೆಗಳ ವಿಧಾನವು ಕೆಳಗಿನಂತೆ ಸ್ಥೂಲವಾಗಿರುತ್ತದೆ:

**ಕನ್ನಡ**

**ಸಾಮಾನ್ಯ ಕನ್ನಡ**

| | | | | |
|---|---|---|---|---|
| 1. | ವಿಷಯದ ಸಮಗ್ರ ಅರ್ಥೈಸುವಿಕೆ | – | 25 | ಅಂಕಗಳು |
| 2. | ಪದ ಪ್ರಯೋಗ | – | 25 | ಅಂಕಗಳು |
| 3. | ವಿಷಯ ಸಂಕ್ಷೇಪಣೆ | – | 25 | ಅಂಕಗಳು |
| 4. | ಪದಜ್ಞಾನ | – | 25 | ಅಂಕಗಳು |
| 5. | ಲಘು ಪ್ರಬಂಧ | – | 25 | ಅಂಕಗಳು |
| 6. | ಇಂಗ್ಲೀಷಿನಿಂದ ಕನ್ನಡಕ್ಕೆ ಭಾಷಾಂತರ | – | 25 | ಅಂಕಗಳು |

***ಅರ್ಹತಾ ಪತ್ರಿಕೆ ಇಂಗ್ಲೀಷ್***

ಈ ಪತ್ರಿಕೆಯ ಗುರಿ, ಅಭ್ಯರ್ಥಿಗಳು ಗಂಭೀರವಾದ ತಾರ್ಕಿಕ ಗದ್ಯವನ್ನು ಓದಲು ಮತ್ತು ಅರ್ಥಮಾಡಿಕೊಳ್ಳಲು ಮತ್ತು ತನ್ನ ವಿಚಾರಗಳನ್ನು ಇಂಗ್ಲೀಷ್‌ನಲ್ಲಿ ಸ್ಪಷ್ಟವಾಗಿ ಮತ್ತು ಸರಿಯಾಗಿ ವ್ಯಕ್ತಪಡಿಸುವ ಪರೀಕ್ಷೆಯಾಗಿರುವುದು.
ಪ್ರಶ್ನೆಗಳ ಮಾದರಿ ಈ ಕೆಳಗಿನಂತೆ ಸ್ಥೂಲವಾಗಿರುತ್ತದೆ:

| | | | | |
|---|---|---|---|---|
| 1. | (Compreshension of given passages) ನೀಡಲಾದ ವಾಕ್ಯವೃಂದಗಳ ವ್ಯಾಪಕತೆ | – | 25 | ಅಂಕಗಳು |
| 2. | (Precise writing) ನಿಖರವಾದ ಬರವಣಿಗೆ | – | 25 | ಅಂಕಗಳು |
| 3. | (Usage) ಪದ ಪ್ರಯೋಗ | – | 25 | ಅಂಕಗಳು |
| 4. | (Vocabulary) ಶಬ್ದ ಸಂಗ್ರಹ | – | 25 | ಅಂಕಗಳು |
| 5. | (Short Essay) ಲಘು ಪ್ರಬಂಧ | – | 25 | ಅಂಕಗಳು |
| 6. | (Communication Skills) ಸಂವಹನ ಕೌಶಲ್ಯಗಳು | – | 25 | ಅಂಕಗಳು |

**ಪತ್ರಿಕೆ –I: ಪ್ರಬಂಧ 250 ಅಂಕಗಳು, 3 ಗಂಟೆಗಳು**

ಎರಡು ಪ್ರಬಂಧಗಳು (ಕನ್ನಡ/ಇಂಗ್ಲಿಷ್ ಭಾಷೆಯಲ್ಲಿ) ಪ್ರತಿಯೊಂದು 125 ಅಂಕಗಳು.

**ಪ್ರಬಂಧ–1**: ಅಂತರರಾಷ್ಟ್ರೀಯ/ರಾಷ್ಟ್ರೀಯ ಮಹತ್ವದ ವಿಷಯಗಳು.

**ಪ್ರಬಂಧ–2**: ರಾಜ್ಯ ಮಹತ್ವ/ಸ್ಥಳೀಯ ಮಹತ್ವ ವಿಷಯಗಳು.

**ಪತ್ರಿಕೆ–IIಸಾಮಾನ್ಯ ಅಧ್ಯಯನಗಳು – 1**

**ವಿಭಾಗ–I: ಇತಿಹಾಸ ಮತ್ತು ಸಾಂಸ್ಕೃತಿಕ ಪರಂಪರೆ (ಭಾರತ ಮತ್ತು ಕರ್ನಾಟಕ) – (ಆರು ಘಟಕಗಳು)**

**ಘಟಕ–I : ಭಾರತದ ಸಾಂಸ್ಕೃತಿಕ ಪರಂಪರೆ (ಆಯ್ದ ಕ್ಷೇತ್ರ ಮತ್ತು ವಿಷಯಗಳು)**

(i) ಸಿಂಧೂ ನಾಗರೀಕತೆ – ಸಿಂಧೂ ನಾಗರೀಕತೆ ಮತ್ತು ವೇದಕಾಲಿನ ನಾಗರೀಕತೆ ನಡುವಿನ ವೈಶಿಷ್ಟ್ಯತೆ – ವರ್ಣ, ಜಾತಿ/ಜಾತಿ ವ್ಯವಸ್ಥೆಯ ವಿಕಾಸ ಧಾರ್ಮಿಕ ಸ್ಥಿತಿ– ಧಾರ್ಮಿಕ ಚಳುವಳಿಗಳ ಉಗಮ.

(ii) ಸಾಹಿತ್ಯ: ಸಂಸ್ಕೃತ ಸಾಹಿತ್ಯ (ಪ್ರಾಚೀನ); ವೇದಕಾಲೀನ ಸಾಹಿತ್ಯ, ಮಹಾಕಾವ್ಯಗಳು ಮತ್ತು ಪುರಾಣಗಳು: ಭಾರತೀಯ ಜನ ಜೀವನ ಹಾಗೂ ಸಂಸ್ಕೃತಿಯ ಮೇಲೆ ಅದರ ಪ್ರಭಾವ; ರಾಜ್ಯಾಡಳಿತದಲ್ಲಿ ಗದ್ಯಕೃತಿಗಳ ರಚನೆಗಳು, ನೀತಿಶಾಸ್ತ್ರ, (ನೀತಿ), ಜನಪ್ರಿಯ ಮತ್ತು ಪಂಚತಂತ್ರ ಕಥೆಗಳು (ಪ್ರಮುಖ ಕೃತಿಗಳ ರಚನೆಗಳು ಮಾತ್ರ); ಸಾಹಿತ್ಯಕ್ಕೆ ಮೊಗಲರ ಕೊಡುಗೆಗಳು.

(iii) ವಿಜ್ಞಾನ ಮತ್ತು ತಂತ್ರಜ್ಞಾನ: ಗಣಿತಶಾಸ್ತ್ರ, ಖಗೋಳ ಶಾಸ್ತ್ರ, ಭೌತಶಾಸ್ತ್ರ, ರಸಾಯನ ಶಾಸ್ತ್ರ, ಸಸ್ಯಶಾಸ್ತ್ರ, ಪ್ರಾಣಿಶಾಸ್ತ್ರ, ಶರೀರ ಶಾಸ್ತ್ರ ಮತ್ತು ಔಷಧ ಶಾಸ್ತ್ರ (ಸರ್ಜರಿಯನ್ನು ಒಳಗೊಂಡು) ನೌಕಾ ನಿರ್ಮಾಣ, ಗಣಿಗಾರಿಕೆ ಮತ್ತು ಲೋಹಶಾಸ್ತ್ರ, ಎಂಜಿನಿಯರಿಂಗ್ ಮತ್ತು ವಾಸ್ತುಶಿಲ್ಪ.

(iv) ಕಲೆಗಳು (ಕರ್ನಾಟಕವನ್ನು ಹೊರತುಪಡಿಸಿ): ಮೌರ್ಯರ ಮತ್ತು ಗುಪ್ತರ ಕಾಲಗಳು, ಖಜುರಾಹೋ ದೇವಾಲಯಗಳು; ಮೌಂಟ್ ಅಬುವಿನ ಜೈನ ದೇವಾಲಯಗಳು ಮತ್ತು ಒಡಿಸಿಯಾದ ದೇವಾಲಯಗಳು; ಪಲ್ಲವ, ಚೋಳ ಮತ್ತು ಪಾಂಡ್ಯರ ಕೊಡುಗೆಗಳು. ಮೊಗಲರ ವಾಸ್ತುಶಿಲ್ಪ; ಕ್ಯಾಥೆಡ್ರಾಲ್ ವಾಸ್ತುಶಿಲ್ಪ; ಬೋಮ್ ಜೀಸಸ್–ಹಳೆಯ ಗೋವಾ, ಸೇಂಟ್ ಪಾಲ್ಸ್ – ಕೋಲ್ಕತ್ತಾ ಸೇಂಟ್ ಥಾಮಸ್–ಚೆನ್ನೈ. ಚಿತ್ರಕಲೆ: ಅಜಂತಾದ ಚಿತ್ರಾಲಂಕಾರಗಳು; ಮೊಗಲರ ಮತ್ತು ರಜಪೂತರ ಕಾಲದ ಚಿತ್ರಕಲೆ. ನೃತ್ಯ ಮತ್ತು ಸಂಗೀತ: ಶಾಸ್ತ್ರೀಯ ಸಂಗೀತ ಮತ್ತು ನೃತ್ಯದ ಮೊಗಲರ ಕೊಡುಗೆಗಳು. ಭಾರತದ ಜನಪದ ಕಲೆಗಳು.

(v) ಬಾಹ್ಯ ಜಗತ್ತಿಗೆ ಭಾರತದ ಸಂಸ್ಕೃತಿಯ ಕೊಡುಗೆ: ಕೇಂದ್ರ ಏಷ್ಯಾ, ಚೀನಾ, ಜಪಾನ್, ಆಗ್ನೇಯಾ ಏಷ್ಯಾ ಮತ್ತು ಶ್ರೀಲಂಕಾ.

(vi) ಭಾರತದ ಧರ್ಮಗಳು.–

(i) ಹಿಂದೂ ಧರ್ಮ: ಸಾಮಾನ್ಯ ವೈಶಿಷ್ಟ್ಯತೆಗಳು ಮತ್ತು ಕೆಲವು ಸಾಮಾನ್ಯ ನಂಬಿಕೆಗಳು – ಪುರುಷಾರ್ಥಗಳು – ಮತಾಚರಣೆಗಳು ಮತ್ತು ನೀತಿಶಾಸ್ತ್ರಗಳು – ಹಬ್ಬಗಳು ಮತ್ತು ಪವಿತ್ರ ದಿನಗಳು – ತೀರ್ಥಯಾತ್ರೆ ಮತ್ತು ಜಾತ್ರೆಗಳು. ಹಿಂದೂ ಪಂಥಗಳು: ವಿವಿಧ ಪಂಥಗಳಲ್ಲಿ ಸಂಯುಕ್ತವಾಗಿರುವಂಥ ಹಿಂದೂ ಧರ್ಮ, ಶೈವ, ವೈಷ್ಣವ ಮತ್ತು ಶಕ್ತ. ಉಪನಿಷತ್ ಮತ್ತು ಭಗವದ್ಗೀತೆಯ ತತ್ವ – ಪತಂಜಲಿಯ ಯೋಗತತ್ವ.

(ii) ಜೈನ ಧರ್ಮ: ತತ್ವಗಳು –ರತ್ನಾತ್ರಯ, ನೀತಿ ಸಂಹಿತೆ, ಸಮಾನತೆ (ಸಮಾನ), ಅಹಿಂಸೆ, ಪಂಥಗಳು; ದಿಗಂಬರ ಮತ್ತು ಶ್ವೇತಾಂಬರ.

(iii) ಬೌದ್ಧ ಧರ್ಮ: ತತ್ವಗಳು – ನಾಲ್ಕು ಮಹಾ ಸತ್ಯಗಳು, ಅಷ್ಟಾಂಗ ಮಾರ್ಗಗಳು, ನಿರ್ವಾಣ, ನೀತಿ ಸಿದ್ಧಾಂಥಗಳು ಪಂಥಗಳು; ಹೀನಾಯಾನ ಮತ್ತು ಮಹಾಯಾನ.

(iv) ಕ್ರಿಶ್ಚಿಯನ್ ಧರ್ಮ: ಯೇಸುಕ್ರಿಸ್ತನ ಬೋಧನೆಗಳು, ಕ್ರಿಶ್ಚಿಯನ್‌ನ ಉಪದೇಶಗಳು, ಸಿದ್ಧಾಂಥಗಳು ಮತ್ತು ಧರ್ಮಶಾಸ್ತ್ರ, ಕ್ರಿಶ್ಚಿಯನ್ ಪಂಗಡಗಳು – ರೋಮನ್ ಕ್ಯಾಥೋಲಿಕ್ ಚರ್ಚ್‌ಗಳು, ಪೂರ್ವ ಸಾಂಪ್ರದಾಯಿಕ ಚರ್ಚ್‌ಗಳು ಮತ್ತು ಪ್ರೊಟೆಸ್ಟಂಟ್‌ಗಳ ಚರ್ಚುಗಳು, ಭಾರತದಲ್ಲಿ ಧರ್ಮ ಪ್ರಚಾರಕ ಚಟುವಟಿಕೆಗಳು.

(v) ಇಸ್ಲಾಂ ಧರ್ಮ: ತತ್ವಗಳು ಮತ್ತು ಆಚರಣೆಗಳು – ದೇವರು, ಧರ್ಮದ ಮೇಲಿನ ನಂಬಿಕೆ ಐದು "ಇಸ್ಲಾಂ ಧರ್ಮ ಕಂಬಗಳು"; ಪವಿತ್ರ ಸ್ಥಳಗಳು ಮತ್ತು ದಿನಗಳು, ಕುಟುಂಬ ವ್ಯವಸ್ಥೆ ಮತ್ತು ಷರಿಯಾ, ಕರ್ನಾಟಕದಲ್ಲಿ ಸೂಫಿಗಳು, ಪಂಥಗಳು: ಶಿಯಾ ಮತ್ತು ಸುನ್ನಿ.

(vi) ಸಿಖ್ಖ್ ಧರ್ಮ: ತತ್ವಗಳು ಮತ್ತು ಆಚರಣೆಗಳು ಮತ್ತು ಇದರ ವಿಕಾಸ.

**ಘಟಕ 2: ಪರಿವರ್ತನೆಯತ್ತ ಭಾರತೀಯ ಸಮಾಜ: ಚಿಂತನೆಯ ಪ್ರಮುಖ ಮಾರ್ಗಗಳು, ಆಧುನಿಕ ಭಾರತದ ಇತಿಹಾಸ – 19ನೇ ಶತಮಾನದ ಪ್ರಾರಂಭದಿಂದ; ಸುಧಾರಣೆಗಳು ಮತ್ತು ಸುಧಾರಕರು,**

1. ಸಾಮಾಜಿಕ ಮತ್ತು ಧಾರ್ಮಿಕ ದೋಷಗಳ ನಿರ್ಮೂಲನೆ
2. ಎಲ್ಲರಿಗಾಗಿ ವೇದಗಳು – ಜಾತ್ಯಾತೀತ ಸಮಾಜ
3. ಆದರ್ಶ ಸೇವೆ
4. ಶೋಷಿತ ಮಾರ್ಗದ ವಿಮೋಚನೆ
5. "ಎರಡು ರಾಷ್ಟ್ರ"ದ ಸಿದ್ಧಾಂತ ಮತ್ತು ಇಸ್ಲಾಮಿಕ್ ಧರ್ಮದ ಪುನರುಜ್ಜೀವನ
6. ಧರ್ಮ ಮತ್ತು ಶಿಕ್ಷಣದ ಮೂಲಕ ಶೋಷಿತ ವರ್ಗದ ಸಬಲೀಕರಣ.
7. ಹಿಂದುತ್ವ ಮತು ದೇಶಭಕ್ತಿ
8. ದ್ರಾವಿಡ ಚಳುವಳಿ
9. ದಲಿತರ ವಿಮೋಚನೆಗಾಗಿ ಹೋರಾಟ ಮತ್ತು ಅವರ ಸಬಲೀಕರಣ
10. ಸಮಾಜವಾದಿ ಪ್ರಸ್ತಾವನೆ ಮತ್ತು ಸಂಪೂರ್ಣ ಕ್ರಾಂತಿ
11. ಗ್ರಾಮ ಸ್ವರಾಜ್, ಸತ್ಯಾಗ್ರಹ ಮತ್ತು ಭೂದಾನ

**ಘಟಕ 3: ಕದಂಬರಿಂದ ಹೊಯ್ಸಳರ ವರೆಗೆ,**

(i) ಕರ್ನಾಟಕದ ಪ್ರಾಚೀನತೆ: ಕನ್ನಡ ಭಾಷೆ ಮತ್ತು ಸಾಹಿತ್ಯ; ಕನ್ನಡ ನಾಡಿನ ವ್ಯಾಪ್ತಿ; ರಾಜ್ಯ ಮತ್ತು ಜಿಲ್ಲಾ ಗೆಜೆಟಿಯರುಗಳು; ಕರ್ನಾಟಕದ ವಸ್ತು ಸಂಗ್ರಹಾಲಯಗಳು ಮತ್ತು ಪ್ರಾಚೀನ ಪತ್ರಾಗಾರಗಳು; ಐತಿಹಾಸಿಕ ಸ್ಮಾರಕಗಳ ಸಂರಕ್ಷಣೆ ಮತು ರಕ್ಷಣೆ – ಭಾರತೀಯ ಪುರಾತತ್ವ ಇಲಾಖೆ ಕೆಲಸಗಳು– ಕರ್ನಾಟಕದಲ್ಲಿ ವಿಶ್ವ ಪಾರಂಪರಿಕ ತಾಣಗಳು.

(ii) ಕದಂಬರಿಂದ ಹೊಯ್ಸಳವರೆಗೆ: ವಾಸ್ತು ಶಿಲ್ಪ, ಶಿಲ್ಪ, ಸಾಹಿತ್ಯ ಮತ್ತು ಧರ್ಮಕ್ಕೆ ಇವರ ಕೊಡುಗೆಗಳು.

**ಘಟಕ 4: ವಿಜಯನಗರ ಸಾಮ್ರಾಜ್ಯ ಮತ್ತು ನಂತರದ ಕಾಲ (1336–1799):**

(i) ವಿಜಯನಗರ ಸಾಮ್ರಾಜ್ಯ: ಸಾಮ್ರಾಜ್ಯದ ಉದಯ, ಉದ್ದೇಶಗಳು ಮತ್ತು ಮಹತ್ವಾಕಾಂಕ್ಷೆ–ವಿದ್ಯಾರಣ್ಯ ರಾಜಕೀಯ ಇತಿಹಾಸ: ಹರಿಹರ, ಬುಕ್ಕ, ಇಮ್ಮಡಿ ದೇವರಾಯ, ಕೃಷ್ಣದೇವರಾಯ ಮತ್ತು ಅಳಿಯ ರಾಮರಾಯ – ತಾಳಿಕೋಟೆ ಕದನ ಮತ್ತು ಅದರ ಪರಿಣಾಮಗಳು. ರಾಜಧಾನಿಯ ವೈಭವ – ಆಡಳಿತ – ಸಮಾಜ, ಆರ್ಥಿಕತೆ ಮತ್ತು ಧಾರ್ಮಿಕತೆ; ಕಲೆಗಳು: ಚಿತ್ರಕಲೆ; ಸಂಗೀತ, ನೃತ್ಯ, ಸಾಹಿತ್ಯ, ವಾಸ್ತುಶಿಲ್ಪ ಮತ್ತು ಶಿಲ್ಪ; ವಿಜಯನಗರದ ವಿದೇಶಿಗರ ವಿವರಣೆ.

(ii) ಧಾರ್ಮಿಕ ಪಂಥಗಳು: ಶಂಕರಚಾರ್ಯರು, ರಾಮಾನುಜಚಾರ್ಯ, ಮಧ್ವಾಚಾರ್ಯರು – ಶ್ರೀ ಬಸವೇಶ್ವರ, ವೀರಶೈವ ಮತ್ತು ವಚನ ಚಳುವಳಿ – ಹರಿದಾಸ ಚಳುವಳಿ – ಕಲಮುಖ ಶಕ್ತ ಮತ್ತು ಪಾಶುಪಥ ಪಂಥಗಳು.

(iii) ಬಹುಮನಿ ಷಾಹಿಗಳು: ಮಹಮದ್ ಗವಾನ್ – ಬಹಮನಿಯ ಕೊಡುಗೆಗಳು – ಬಿಜಾಪುರದ ಆದಿಲ್ ಷಾಹಿಗಳು, ಸಾಹಿತ್ಯ ಮತ್ತು ವಾಸ್ತುಶಿಲ್ಪಕ್ಕೆ ಕೊಡುಗೆಗಳು–ಕರ್ನಾಟಕದ ಸೂಫಿಗಳು.

(iv) ಚಿಕ್ಕದೇವರಾಜ ಒಡೆಯರವರ ಕೊಡುಗೆಗಳು – ಕೆಳದಿ ಮತ್ತು ಚಿತ್ರದುರ್ಗದ ನಾಯಕರು; ಕಿತ್ತೂರಿನ ರಾಣಿಚೆನ್ನಮ್ಮ ಮತ್ತು ಸಂಗೊಳ್ಳಿ ರಾಯಣ್ಣ, ಯಲಹಂಕದ ನಾಡಪ್ರಭು; ಹೈದರಾಲಿ ಮತ್ತು ಟಿಪ್ಪು ಸುಲ್ತಾನ್ (1761–1799).

**ಘಟಕ 5: ಆಧುನಿಕ ಮೈಸೂರು (1799–1947)**

(i) ಕೃಷ್ಣರಾಜ ಒಡೆಯರ್ III– ಅವರ ಕೊಡುಗೆಗಳು;

(ii) ಕರ್ನಾಟಕದಲ್ಲಿ ಬ್ರಿಟಿಷರ ವಿರುದ್ಧ ಸಶಸ್ತ್ರ ದಂಗೆ

(iii) ಕಮೀಷನರುಗಳ ಆಳ್ವಿಕೆ (1831–1881)

(iv) ಹೈದರಾಬಾದ್–ಕರ್ನಾಟಕದಲ್ಲಿ ನಿಜಾಮರ ಆಳ್ವಿಕೆ

(v) ದಿವಾನರ ಆಳ್ವಿಕೆಯಲ್ಲಿ ಮೈಸೂರು ಪ್ರಗತಿ.

**ಘಟಕ 6: ಕರ್ನಾಟಕದಲ್ಲಿ ಸ್ವಾತಂತ್ರ್ಯ ಚಳುವಳಿ ಮತ್ತು ಏಕೀಕರಣ (1885–1956)**

(i) ರಾಷ್ಟ್ರೀಯತೆಯ ಉದಯ; ಪೂರ್ವಗಾಂಧಿಯುಗ (1885–1920); ಗಾಂಧಿಯುಗ (1920–1948)

(ii) ಹೈದರಾಬಾದ್ – ಕರ್ನಾಟಕದಲ್ಲಿ ಸ್ವಾತಂತ್ರ್ಯ ಚಳುವಳಿ

(iii) ಸ್ವಾತಂತ್ರ್ಯ ಹೋರಾಟದಲ್ಲಿ ಪ್ರಮುಖ ವ್ಯಕ್ತಿಗಳು

(iv) ಕರ್ನಾಟಕ ಏಕೀಕರಣ; ಏಕೀಕರಣ ಚಳುವಳಿಯ ಉದಯಕ್ಕೆ ಕಾರಣಗಳು – ಆಲೂರು ವೆಂಕಟರಾವ್ – ಸಾಕ್ಷರತೆಯ ಪಾತ್ರ, ಸಾಂಸ್ಕೃತಿಕ ಸಂಸ್ಥೆಗಳು ಮತ್ತು ಪತ್ರಿಕಾ ಮಾಧ್ಯಮ – ಕರ್ನಾಟಕ ಏಕೀಕರಣದ ಮೂರು ಹಂತಗಳು (1947–1956)

(v) ಸಾಮಾಜಿಕ ಮತ್ತು ಸಾಂಸ್ಕೃತಿಕ ಬೆಳವಣಿಗೆಗಳು; ಧರ್ಮ ಪ್ರಚಾರಕದಿಂದ ಮತ್ತು ಸ್ವಯಂ ಸೇವಾ ಸಂಸ್ಥೆಗಳಿಂದ ಶಿಕ್ಷಣ ಪ್ರಸಾರ– ಮುದ್ರಣ ಮತ್ತು ಪತ್ರಿಕಾ – ಸಾಹಿತ್ಯ ಮತ್ತು ವಿದ್ವತ್ಪೂರ್ಣ ಅಧ್ಯಯನಗಳು – ಕನ್ನಡ ಸಾಹಿತ್ಯದಲ್ಲಿ ನವೀನ ಸಾಹಿತ್ಯ ಪ್ರಕಾರಗಳು – ಹಿಂದುಳಿದ ವರ್ಗದ ಚಳುವಳಿ – ಮಿಲ್ಲರ್ ಸಮಿತಿಯ ವರದಿ, ಕರ್ನಾಟಕದಲ್ಲಿ ಜಾನಪದ ಕಲೆಗಳು.

**ವಿಭಾಗ–II ಸಾಮಾಜಿಕ ಮತ್ತು ರಾಜಕೀಯ ದೃಷ್ಟಿಕೋನ –(7 ಘಟಕಗಳು)**

1. **ಸ್ವಾತಂತ್ರ್ಯ ನಂತರದ ಕರ್ನಾಟಕ**– ರಾಜಕೀಯ ಬಲವರ್ಧನೆಗಾಗಿ – ಸರ್ಕಾರಗಳ ಸತತ ಪ್ರಯತ್ನಗಳು – ಹಿಂದುಳಿದ ವರ್ಗಗಳು ಮತ್ತು ಸಾಮಾಜಿಕ ನ್ಯಾಯ – ಹಾವನೂರ ಸಮಿತಿ – ವೆಂಕಟಸ್ವಾಮಿ ಸಮಿತಿ – ಚಿನ್ನಪ್ಪರೆಡ್ಡಿ ಸಮಿತಿಯ ವರದಿಗಳು – ಇತ್ತೀಚಿನ ಧೋರಣೆಗಳು – ದಲಿತ ಚಳುವಳಿ – ದೇವರಾಜ ಅರಸ್ ಮತ್ತು ಭೂಸುಧಾರಣೆಗಳು. ಭಾಷಾ ವಿವಾದ: ಗೋಕಾಕ್ ಚಳುವಳಿ – ವಿವಾದಾಂಶಗಳು ಮತ್ತು ದೃಷ್ಟಿಕೋನಗಳು. ಅಂತರರಾಜ್ಯ ವಿವಾದಗಳು – ಗಡಿವಿವಾದಗಳು – ಮಹಾಜನ್ ಸಮಿತಿಯ ವರದಿ ಮತ್ತು ಅದರ ಪ್ರಭಾವ – ಜಲ ವಿವಾದಗಳು – ರೈತರ ಚಳುವಳಿಗಳು, ಪ್ರಾದೇಶಿಕ ಅಸಮತೋಲನ ಮತ್ತು ನಂಜುಂಡಪ್ಪ ಸಮಿತಿಯ ವರದಿ.
2. **ಸಾಮಾಜಿಕ ಬದಲಾವಣೆ ಮತ್ತು ಚಳುವಳಿಗಳು** – ಸಾಮಾಜಿಕ ರಚನೆ ಮತ್ತು ಸಾಮಾಜಿಕ ಬದಲಾವಣೆ, ಸಾಮಾಜಿಕ ಬದಲಾವಣೆಯ ಸಿದ್ಧಾಂತಗಳು, ಅಸಂಘಟಿತ ಸಮಾಜ ಮತ್ತು ಸಾಮಾಜಿಕ ಚಳುವಳಿಗಳು. ಉದ್ದೇಶಿತ ಸಾಮಾಜಿಕ ಬದಲಾವಣೆ, ಸಾಮಾಜಿಕ ನೀತಿ ಮತ್ತು ಸಾಮಾಜಿಕ ಅಭಿವೃದ್ಧಿ.

3. **ಸಾಮಾಜಿಕ ಬದಲಾವಣೆ ಮತ್ತು ಆಧುನೀಕರಣ**–ಸಂಘರ್ಷ ಪಾತ್ರದ ಸಮಸ್ಯೆಗಳು –ಪೀಳಿಗೆ ನಡುವಿನ ಅಂತರ, ಯುವಜನರ ಅಶಾಂತಿ ಮತ್ತು ಶಿಕ್ಷಣದ ವಾಣಿಜ್ಯೀಕರಣ, ಶೈಕ್ಷಣಿಕ ಶಕ್ತಿಯಾಗಿ ಭಾರತ ಹೊರಹೊಮ್ಮುವಿಕೆ – ಮಹಿಳೆಯ ಸ್ಥಾನಮಾನದ ಬದಲಾವಣೆ ಮತ್ತು ಸಾಮಾಜಿಕ ಚಳುವಳಿಗಳು, ಕೈಗಾರಿಕರಣ ಮತ್ತು ನಗರೀಕರಣ ನಿರ್ಬಂಧ ಗುಂಪುಗಳ ಪಾತ್ರ, ಸಂಸ್ಕೃತೀಕರಣ, ಪಾಶ್ಚೀಮಾತ್ಯೀಕರಣ ಮತ್ತು ಆಧುನೀಕರಣ – ಆಧುನೀಕರಣ ವಿರುದ್ಧ ಪಾರಂಪರಿಕತೆ. ಪ್ರಸ್ತುತ ಸಾಮಾಜಿಕ ಪಿಡುಗುಗಳು – ಮೂಲ ಭೂತವಾದಿತನ ಮತ್ತು ಭಯೋತ್ಪಾದನೆ, ನಕ್ಸಲ್‌ವಾದ, ಸ್ವಜನ ಪಕ್ಷಪಾತ, ಭ್ರಷ್ಟಾಚಾರ ಮತ್ತು ಕಪ್ಪುಹಣ.

4. **ಸರ್ಕಾರ ಮತ್ತು ರಾಜಕೀಯ ವ್ಯವಸ್ಥೆ:** ವಿಧಾನ ಮಂಡಲ; ಕಾರ್ಯಾಂಗ ಮತ್ತು ನ್ಯಾಯಾಂಗ, ಪಾರಂಪರಿಕ ಸಮಾಜದಲ್ಲಿ ಪ್ರಜಾಸತ್ತಾತ್ಮಕ ರಾಜಕೀಯ ವ್ಯವಸ್ಥೆಯ ಪ್ರಕಾರ್ಯ, ರಾಜಕೀಯ ಪಕ್ಷ ಮತ್ತು ಅದರ ಸಾಮಾಜಿಕ ಸಂಯೋಜನೆ.

5. **ಅಧಿಕಾರದ ವಿಕೇಂದ್ರೀಕರಣ**– ಅಧಿಕಾರದ ವಿಕೇಂದ್ರೀಕರಣ ಮತ್ತು ರಾಜಕೀಯ ಭಾಗವಹಿಸುವಿಕೆ. ಕೇಂದ್ರ ಸರ್ಕಾರ, ಸಂಸತ್ತು, ಸಚಿವ ಸಂಪುಟ, ಸರ್ವೋಚ್ಚ ನ್ಯಾಯಾಲಯ, ನ್ಯಾಯಿಕ ವಿಮರ್ಶೆ, ಕೇಂದ್ರ–ರಾಜ್ಯದ ಸಂಬಂಧಗಳು, ರಾಜ್ಯ ಸರ್ಕಾರ, ರಾಜ್ಯಪಾಲರ ಪಾತ್ರ, ಪಂಚಾಯತ್ ರಾಜ್, ಭಾರತದ ರಾಜಕಾರಣದಲ್ಲಿ ವರ್ಗ ಮತ್ತು ಜಾತಿ, ಪ್ರಾಂತೀಯ ರಾಜಕೀಯ, ಭಾಷೀಕರಣ ಮತ್ತು ಕೋಮುವಾದ. ಜಾತ್ಯಾತೀಕರಣ ಕಾರ್ಯನೀತಿಯ ಸಮಸ್ಯೆಗಳು ಮತ್ತು ರಾಷ್ಟ್ರೀಯ ಏಕೀಕರಣ, ರಾಜಕೀಯ ಭಾಗವಹಿಸುವಿಕೆ ಮತ್ತು ಮತದಾನ, ಮತ ಬ್ಯಾಂಕ್ ರಾಜಕೀಯ.

6. **ಸಾಮಾಜಿಕ ಆರ್ಥಿಕ ವ್ಯವಸ್ಥೆ:** ಜಾಜಮಾನಿ ಪದ್ಧತಿ ಮತ್ತು ಸಾಂಪ್ರದಾಯಿಕ ಸಮಾಜದ ಮೇಲೆ ಅದರ ಪ್ರಭಾವ. ಮಾರುಕಟ್ಟೆ ಅರ್ಥವ್ಯವಸ್ಥೆ (Market Economy) ಮತ್ತು ಅದರ ಸಾಮಾಜಿಕ ಪರಿಣಾಮಗಳು, ವೃತ್ತೀಯ ವೈವಿಧ್ಯೀಕರಣ ಮತ್ತು ಸಾಮಾಜಿಕ ರಚನೆ, ವೃತ್ತಿ ಮತ್ತು ವೃತ್ತಿಪರ (Professionalisation), ಕಾರ್ಮಿಕ ಸಂಘಗಳ ಪಾತ್ರ, ಸಾಮಾಜಿಕ ನಿರ್ಣಾಯಕಗಳು ಮತ್ತು ಆರ್ಥಿಕ ಅಭಿವೃದ್ಧಿಯ ಪರಿಣಾಮ, ಆರ್ಥಿಕ ಅಸಮಾನತೆಗಳು, ಶೋಷಣೆ ಮತ್ತು ಭ್ರಷ್ಟಚಾರ, ಜಾಗತೀಕರಣ ಮತ್ತು ಅದರ ಸಮಾಜಿಕ ಪರಿಣಾಮ.

7. **ಗ್ರಾಮೀಣ–ಸಾಮಾಜಿಕ ವ್ಯವಸ್ಥೆ ಮತ್ತು ಗ್ರಾಮೀಣಾಭಿವೃದ್ಧಿ:**– ಗ್ರಾಮ ಸಮುದಾಯದ ಸಾಮಾಜಿಕ ಸಾಂಸ್ಕೃತಿಕ ಆಯಾಮಗಳು, ಸಾಂಪ್ರದಾಯಿಕ ಅಧಿಕಾರ ರಚನೆ, ಪ್ರಜಾಸತ್ತಾತ್ಮೀಕರಣ ಮತ್ತು ನಾಯಕತ್ವ, ಬಡತನ, ಋಣತ್ವ, ಜೀತ ಕಾರ್ಮಿಕ, ಭೂಸುಧಾರಣೆಗಳ ಸಾಮಾಜಿಕ ಪರಿಣಾಮಗಳು, ಗ್ರಾಮೀಣಾಭಿವೃದ್ಧಿ ಯೋಜನೆಗಳು, ಹಸಿರುಕ್ರಾಂತಿ, ಗ್ರಾಮೀಣಾಭಿವೃದ್ಧಿಯ ಹೊಸ ಕಾರ್ಯತಂತ್ರಗಳು, ಬದಲಾಗುತ್ತಿರುವ ಗ್ರಾಮೀಣ ಚಿತ್ರಣ.

**ವಿಭಾಗ–III ಭಾರತೀಯ ಅರ್ಥವ್ಯವಸ್ಥೆ– ಯೋಜನೆ – ಗ್ರಾಮೀಣಾಭಿವೃದ್ಧಿ (8 ಘಟಕಗಳು)**

1. **ಭಾರತದ ಅರ್ಥವ್ಯವಸ್ಥೆ**; ಸ್ವಾತಂತ್ರ್ಯ ನಂತರದ ಬೆಳವಣಿಗೆ – ಕೃಷಿಯ ಅನುಭವ, ಕೈಗಾರಿಕೆ ಮತ್ತು ತೃತೀಯ ವಲಯಗಳು, ಬೆಳವಣಿಗೆ ಮತ್ತು ಹಂಚಿಕೆ ನ್ಯಾಯ, ಬಡತನ ಮತ್ತು ಅಸಮಾನತೆ, ಯೋಜನಾ ಅವಧಿಯಲ್ಲಿ ಕರ್ನಾಟಕ ಅರ್ಥವ್ಯವಸ್ಥೆಯ ಬೆಳವಣಿಗೆ ಯುಗ, ರಾಜ್ಯ ಅರ್ಥ ವ್ಯವಸ್ಥೆಯಲ್ಲಿ ವೃದ್ಧಿ ಮತ್ತು ಕ್ಷೇತ್ರೀಯ ಬದಲಾವಣೆಗಳು ಮತ್ತು ಪರಸ್ಪರ ಸಂಪರ್ಕ.

2. **ಭಾರತ ಮತ್ತು ಅಂತರರಾಷ್ಟ್ರೀಯ ಆರ್ಥಿಕ ಸಂಬಂಧಗಳು**:–ಬೆಳವಣಿಗೆ ಮತ್ತು ವ್ಯಾಪಾರ, ರಫ್ತುಗಳು ಮತ್ತು ಆಮದುಗಳ ಪರಿಮಾಣ, ಸಂಯೋಜನೆ ಮತ್ತು ಮಾರ್ಗ, ಆರ್ಥಿಕ ಅಭಿವೃದ್ಧಿಯಲ್ಲಿ ದೇಶೀಯ ಮತ್ತು ವಿದೇಶಿ ಬಂಡವಾಳ, ಭಾರತದ ವಿದೇಶಿ ವ್ಯಾಪಾರ ನೀತಿಯಲ್ಲಿ ಬದಲಾವಣೆಗಳು, ಸಂದಾಯಗಳ ಬಾಕಿ ಮತ್ತು ವಿದೇಶಿ ವಿನಿಮಯ, ಕರ್ನಾಟಕದ ರಫ್ತುಗಳು–ಪರಿಮಾಣ, ಸಂಯೋಜನೆ ಮತ್ತು ಮಾರ್ಗ.

3. **ಅಭಿವೃದ್ಧಿಯ ಮಾರ್ಗಗಳು**: ಪ್ರಾಂತ್ಯಗಳ ಮಧ್ಯೆ ಹಾಗೂ ಗ್ರಾಮೀಣ ಮತ್ತು ನಗರ ಪ್ರದೇಶಗಳ ನಡುವಿನ ತಾರತಮ್ಯ, ತಾರತಮ್ಯಗಳನ್ನು ತಗ್ಗಿಸಲು ಸಾರ್ವಜನಿಕ ಕಾರ್ಯನೀತಿಗಳು, ವಿಶೇಷ ಆರ್ಥಿಕ ವಲಯಗಳ ನಿರೀಕ್ಷೆಗಳು ಮತ್ತು ಸಮಸ್ಯೆಗಳು, ಕರ್ನಾಟಕದ ಪ್ರಗತಿಯಲ್ಲಿ ತಾರತಮ್ಯ ಮತ್ತು ಸಾರ್ವಜನಿಕ ಕಾರ್ಯನೀತಿಗಳು, ಅಭಿವೃದ್ಧಿ ತಾರತಮ್ಯದ ಪರಿಹಾರ, ಪ್ರಾದೇಶಿಕ ಅಭಿವೃದ್ಧಿ ಮಂಡಳಿಗಳು.

4. **ಯೋಜನೆ – ಯೋಜನೆಯ ಗುರಿಗಳು**: ಉದ್ದೇಶಗಳು ಮತ್ತು ಪ್ರಸ್ತಾಪಗಳು, ಪಂಚವಾರ್ಷಿಕ ಯೋಜನೆಗಳ ಸಾಧನೆಗಳು ಮತ್ತು ವಿಫಲತೆಗಳು (I ರಿಂದ VII ರ ವರೆಗಿನ ಪಂಚವಾರ್ಷಿಕ ಯೋಜನೆಗಳು) ಹೊಸ ಆರ್ಥಿಕ ನೀತಿಗಳ ಆಡಳಿತ ಕ್ರಮದಲ್ಲಿ ಅಭಿವೃದ್ಧಿ ಯೋಜನೆಗಳು (VIIIನೇ ಪಂಚವಾರ್ಷಿಕ ಯೋಜನೆಯ ನಂತರ) ಕರ್ನಾಟಕದಲ್ಲಿ ಯೋಜನೆಗಳು.

5. **ವಿಕೇಂದ್ರೀಕರಣ**: ಉನ್ನತ ಯೋಜನೆ ಮತ್ತು ಮೂಲಭೂತ ಯೋಜನೆಯ ಸಾಧಕ ಮತ್ತು ಭಾದಕಗಳು ಪಂಚಾಯತ್‌ರಾಜ್ ಸಂಸ್ಥೆಗಳಲ್ಲಿ ಯಾಂತ್ರಿಕ ಯೋಜನೆ ಮತ್ತು ಅನುಭವ, ಯೋಜನೆ ರೂಪಿಸುವುದು ಮತ್ತು ಸಾಮರ್ಥ್ಯ ವೃದ್ಧಿಗೊಳಿಸುವುದು. ಯೋಜನೆ ಮತ್ತು ಹಣಕಾಸು, ಕರ್ನಾಟಕದಲ್ಲಿ ವಿಕೇಂದ್ರಿಕೃತ ಯೋಜನೆ, ಸಂಪನ್ಮೂಲ ಕ್ರೋಢೀಕರಣ ಮತ್ತು ವಹಿಸುವಿಕೆ, ಜಿಲ್ಲಾ ಯೋಜನಾ ಸಮಿತಿ, ರಾಜ್ಯ ಹಣಕಾಸು ಮತ್ತು ಸ್ಥಳೀಯ ಹಣಕಾಸುಗಳು, ರಾಜ್ಯ ಹಣಕಾಸು ಆಯೋಗ.

6. **ಗ್ರಾಮೀಣಾಭಿವೃದ್ಧಿ:** ರಾಷ್ಟ್ರೀಯ ಅರ್ಥವ್ಯವಸ್ಥೆಯಲ್ಲಿ ಕೃಷಿಯ ಪ್ರಾಮುಖ್ಯತೆ, ಗಾಂಧಿಮಾರ್ಗದ ಗ್ರಾಮೀಣ ಅಭಿವೃದ್ಧಿ ಭೂಸುಧಾರಣೆಗಳು, ಬೇಸಾಯ ಮತ್ತು ಉತ್ಪಾದಕತೆಯ ಗಾತ್ರ, ನೀರಾವರಿ ಮತ್ತು ಒಣಬೇಸಾಯದ ಸಮಸ್ಯೆಗಳು, ಆಹಾರ ಭದ್ರತೆ, ಗ್ರಾಮೀಣ ಸಾಲ, ಕೃಷಿ ಮಾರುಕಟ್ಟೆ, ಕೃಷಿ ಕಾರ್ಮಿಕ, ಗ್ರಾಮೀಣ ಕೈಗಾರಿಕೆಗಳು ಮತ್ತು ಉದ್ಯೋಗ. ಕರ್ನಾಟಕ ಕೃಷಿಯ ಸಮಸ್ಯೆಗಳು, ಗ್ರಾಮೀಣ ಆರ್ಥಿಕತೆಯ ಮೂಲಸೌಕರ್ಯಗಳು (ಇಂಧನ, ನೀರಾವರಿ, ಸಾರಿಗೆ, ಸಂಪರ್ಕ (Communication), ಮಾರುಕಟ್ಟೆಗಳು) ಗ್ರಾಮೀಣ ಸಾಮಾಜಿಕ ಮೂಲಸೌಕರ್ಯಗಳು–ವಸತಿ, ಕುಡಿಯುವ ನೀರು,

ನೈರ್ಮಲ್ಯ ಮತ್ತು ಚರಂಡಿ ವ್ಯವಸ್ಥೆ, ಗ್ರಾಮೀಣ ಆರೋಗ್ಯ ವ್ಯವಸ್ಥೆಗಳು ಮತ್ತು ಅವುಗಳ ಹಂಚಿಕೆ. ಕರ್ನಾಟಕದಲ್ಲಿ ಆರ್ಥಿಕ ಅಭಿವೃದ್ಧಿ ಮತ್ತು ಸಾಮಾಜಿಕ ಮೂಲಸೌಕರ್ಯಗಳು, ಕರ್ನಾಟಕದಲ್ಲಿ ಗ್ರಾಮೀಣ ಮಾರುಕಟ್ಟೆಗಳು, ಕರ್ನಾಟಕದಲ್ಲಿ ಗ್ರಾಮೀಣ ವಸತಿ ಮತ್ತು ಆರೋಗ್ಯ ಪಾಲನಾ ವ್ಯವಸ್ಥೆಗಳು.

7. **ಗ್ರಾಮೀಣಾಭಿವೃದ್ಧಿಯ ಪ್ರಾರಂಭದ ಹಂತಗಳು:** ಬಡತನ ನಿರ್ಮೂಲನೆ ಹಾಗೂ ಉದ್ಯೋಗ ಸೃಜನೆ ಕಾರ್ಯಕ್ರಮಗಳು, ಪಂಚವಾರ್ಷಿಕ ಯೋಜನೆ ಮತ್ತು ಒಟ್ಟಾರೆ ಅಭಿವೃದ್ಧಿ, ಗ್ರಾಮೀಣ ಹಣಕಾಸಿನ ಸಂಸ್ಥೆಗಳು, ಗ್ರಾಮೀಣ ಪ್ರದೇಶಗಳಲ್ಲಿ ಸಾಮಾನ್ಯ ಸ್ವತ್ತು ಸಂಪನ್ಮೂಲಗಳ ಅಭಿವೃದ್ಧಿ ಮತ್ತು ಸಂರಕ್ಷಣೆ – ಗ್ರಾಮ ಹುಲ್ಲುಗಾವಲುಗಳು ಮತ್ತು ಮರಮುಟ್ಟುಗಳು, ಜಲಭಾಗಗಳು, ಗ್ರಾಮೀಣ ಪ್ರದೇಶಗಳಲ್ಲಿ ನಗರ ಸೌಕರ್ಯಗಳನ್ನು ಒದಗಿಸುವಿಕೆ (ಪಿಯುಆರ್ಎ).ಕರ್ನಾಟಕದಲ್ಲಿ ಗ್ರಾಮೀಣಾಭಿವೃದ್ಧಿ ಯೋಜನೆಗಳು, ಕರ್ನಾಟಕದಲ್ಲಿ ಸ್ವ–ಸಹಾಯ ಗುಂಪುಗಳು, ಮತ್ತು ಕಿರು ಬಂಡವಾಳ ಸಂಸ್ಥೆಗಳು, ಕರ್ನಾಟಕದ ಗ್ರಾಮೀಣ ಕೆರೆ ಪುನರುಜ್ಜೀವನ, ಕುಡಿಯುವ ನೀರು, ನೈರ್ಮಲ್ಯ ಮತ್ತು ಆರೋಗ್ಯ ಸಂರಕ್ಷಗೆ ಬಾಹ್ಯ ನೆರವು.

8. **ದತ್ತಾಂಶ ಸಂಗ್ರಹಣೆ ವಿಶ್ಲೇಷಣೆ–ಅರ್ಥ ವಿವರಣೆ:–** ಅಂಕಿಅಂಶಗಳ ದತ್ತಾಂಶ ಸಂಗ್ರಹಣೆ, ಅರ್ಥ ವಿವರಣೆ ಮತ್ತು ಗುಣಾವಗುಣ ವಿವೇಚನೆ, ಗ್ರಾಫ್‌ಗಳು ಮತ್ತು ಚಾರ್ಟ್‌ಗಳ ಅಧ್ಯಯನ, ಬಾರ್ ಗ್ರಾಫ್‌ಗಳು, ಲೈನ್ ಗ್ರಾಫ್‌ಗಳು ಮತ್ತು ಪೈಚಾರ್ಟ್‌ಗಳು, ಕೋಷ್ಟಕ ಮತ್ತು ರೇಖಾಕೃತಿ ದತ್ತಾಂಶದ ಮೇಲೆ ಆಧರಿತವಾದ ಸಮಸ್ಯೆಗಳು –ಅಂಕಿಅಂಶಗಳ ದತ್ತಾಂಶ ಪರ್ಯಾಪ್ತತೆ – ಸಂಭಾವ್ಯತೆಯನ್ನಾಧರಿಸಿದ ಸಮಸ್ಯೆಗಳು ಪರಿವರ್ತನೆಗಳು ಮತ್ತು ಸಂಯೋಜನೆಗಳು – ಪರಿಮಾಣಾತ್ಮಕ ಸಾಮರ್ಥ್ಯ – ಸಂಖ್ಯಾ ಅನುಕ್ರಮಗಳು, ಶ್ರೇಣಿಗಳು, ಸರಾಸರಿಗಳು, ಸಂಖ್ಯಾ ಪದ್ಧತಿಗಳು ಅನುಪಾತ ಮತ್ತು ಪ್ರಮಾಣ, ಲಾಭ ಮತ್ತು ನಷ್ಟ, ಶೇಕಡಾವಾರು, ಸಮಯ ಮತ್ತು ಕೆಲಸ, ವೇಗ–ಸಮಯ–ಅಂತರ, ಸರಳಬಡ್ಡಿ, ವಿಶ್ಲೇಷಣಾತ್ಮಕ ಮತ್ತು ನಿರ್ಣಯಾತ್ಮಕ ಕಾರಣ, ಓದುವ ಗ್ರಹಿಕೆ.

**ಪತ್ರಿಕೆ – IIIಸಾಮಾನ್ಯ ಅಧ್ಯಯನಗಳು–2**

<u>ವಿಭಾಗ I – ಭೌತಿಕ ಲಕ್ಷಣಗಳು ಮತ್ತು ಸ್ವಾಭಾವಿಕ ಸಂಪನ್ಮೂಲಗಳು</u>

**ವಿಶ್ವ ಭೂಗೋಳಶಾಸ್ತ್ರ**

1. **ಭೂ ಮಂಡಲ –** ಸೌರಮಂಡಲದಲ್ಲಿ ಭೂಮಿಯ ಸ್ಥಾನ, ಬಂಡೆಗಳು, ಭೂಕಂಪಗಳು, ಜ್ವಾಲಾಮುಖಿಗಳು, ಶಿಲಾ ಫಲಕಗಳ ಸಂಚಲನ, ಸವೆತ, ಕಾರಕಗಳು. **ವಾಯುಮುಂಡಲ –** ರಚನೆ ಮತ್ತು ಸಂಯೋಜನೆ – ಹವಾಮಾನ ಮತ್ತು ವಾಯುಗುಣದ ಅಂಶಗಳು – ವ್ಯಾಪಕವಾದ ಹವಾಮಾನದ ವಿಧಗಳು. **ಜಲಮಂಡಲ –** ವಿಶ್ವ ಸಾಗರಗಳ ಲವಣಾಂಶ – ಸಾಗರ ಪ್ರವಾಹಗಳು ಮತ್ತು ಅಲೆಗಳು – ಸಾಗರ ನಿಕ್ಷೇಪಗಳು.

2. **ಭೂ ಖಂಡಗಳ ಪ್ರಕೃತಿ ಗೋಚರ ವಿಷಯಗಳು ಮತ್ತು ಜನಸಾಂದ್ರತೆ ವಿವರಣೆ.–** ಪರ್ವತಗಳು, ನದಿಗಳು, ಅರಣ್ಯಗಳು, ಹುಲ್ಲುಗಾವಲು ಭೂಮಿಗಳು, ಮರುಭೂಮಿಗಳು, ಮಾನವ ಜನಾಂಗಗಳು, ಜನಸಂಖ್ಯೆಯ ಬದಲಾವಣೆ, ವಿತರಣೆ ಮತ್ತು ಜನಸಂಖ್ಯಾ ಪರಿವರ್ತನೆ, ಸಾಂದ್ರತೆ, ಲಿಂಗಾನುಪಾತ, ಜೀವನದ ಗುಣಮಟ್ಟ, ಜೀವಮಾನ ನಿರೀಕ್ಷೆ, ಸಾಕ್ಷರತೆ, ಜೀವನದ ಗುಣಮಟ್ಟ ಮತ್ತು ವಲಸೆ.

**ಭಾರತದ ಭೂಗೋಳಶಾಸ್ತ್ರ**

3. **ಭಾರತದ ಭೌಗೋಳಿಕತೆ:–** ಹವಾಗುಣ, ನದಿಗಳು, ಮಣ್ಣು, ನೈಸರ್ಗಿಕ ಸಸ್ಯಗಳು,
**ಖನಿಜ ಸಂಪನ್ಮೂಲಗಳು:** ಕಬ್ಬಿಣದ ಅದಿರು ಮತ್ತು ಮ್ಯಾಂಗನೀಸ್ – ತಾಮ್ರ ಮತ್ತು ಬಾಕ್ಸೈಟ್, ಕಲ್ಲಿದ್ದಲು, ಪೆಟ್ರೋಲಿಯಂ ಮತ್ತು ನೈಸರ್ಗಿಕ ಅನಿಲ. ಪರಮಾಣು ನಿಕ್ಷೇಪಗಳು. **ಮುಖ್ಯ ಬೆಳೆಗಳು:** ಧಾನ್ಯಗಳು, ಸಣ್ಣ ಕಾಳುಗಳು, ಎಣ್ಣೆ ಬೀಜಗಳು, ತೋಟದ ಬೆಳೆಗಳು, ವಾಣಿಜ್ಯ ಬೆಳೆಗಳ ಹಂಚಿಕೆ ಮತ್ತು ಉತ್ಪಾದನೆ,**ಭಾರತೀಯ ಜನಸಂಖ್ಯಾಶಾಸ್ತ್ರ –** ಬೆಳವಣಿಗೆ, ರಚನೆ, ಹಂಚಿಕೆ, ಸಾಂದ್ರತೆ, ಮಾನವ ಅಭಿವೃದ್ಧಿ ಸೂಚ್ಯಂಕ ಜನಸಂಖ್ಯಾ ಶಾಸ್ತ್ರದ ದತ್ತಾಂಶ.

4. **ಕೈಗಾರಿಕಾ ಯೋಜನೆ ಮತ್ತು ಅಭಿವೃದ್ಧಿ:** ಭಾರೀ, ಮಧ್ಯಮ, ಸಣ್ಣ ಮತ್ತು ಅತಿಸಣ್ಣ ಕೈಗಾರಿಕೆಗಳ ಬೆಳವಣಿಗೆ ಮತ್ತು ಹಂಚಿಕೆ – ಭಾರತದ ಕೈಗಾರಿಕಾ ಪ್ರದೇಶಗಳು. ಕೈಗಾರಿಕಾ ಮೂಲ ಸೌಕರ್ಯ – ರೈಲ್ವೆಗಳು, ರಸ್ತೆಗಳು ಮತ್ತು ಬಂದರುಗಳು. ಹಿಂದುಳಿದ ಪ್ರದೇಶಗಳು ಮತ್ತು ಗ್ರಾಮೀಣ ಕೈಗಾರೀಕೀಕರಣ.ಪ್ರಾದೇಶಿಕ ಯೋಜನೆ ಮತ್ತು ಅಭಿವೃದ್ಧಿ ಬುಡಕಟ್ಟು ಮತ್ತು ಗುಡ್ಡಗಾಡು ಪ್ರದೇಶಗಳ, ಬರಪೀಡಿತ ಪ್ರದೇಶಗಳು, ಅಚ್ಚುಕಟ್ಟು ಪ್ರದೇಶಗಳು ಮತ್ತು ಜಲಾನಯನ ಪ್ರದೇಶಗಳು, ಪಟ್ಟಣಗಳು ಮತ್ತು ನಗರಗಳ ವರ್ಗೀಕರಣ, ನಗರ ವಿನ್ಯಾಸ.

**ಕರ್ನಾಟಕ ಭೂಗೋಳಶಾಸ್ತ್ರ**

5. **ಭೌಗೋಳಿಕ ವಿಭಾಗಗಳು.–** ಹವಾಮಾನ, ನದಿಗಳು, ಮಳೆ ಹಂಚಿಕೆ, ನೈಸರ್ಗಿಕ ಸಸ್ಯವರ್ಗ ಮತ್ತು ಮಣ್ಣು, ಕೃಷಿ ಮತ್ತು ಕೃಷಿ ಹವಾಮಾನ ಪ್ರದೇಶಗಳು, ಮುಖ್ಯ ಬೆಳೆಗಳು, ಕರ್ನಾಟಕದ ತೋಟ ಮತ್ತು ವಾಣಿಜ್ಯ ಬೆಳೆಗಳು, ಕರ್ನಾಟಕದ ಖನಿಜ ಸಂಪನ್ಮೂಲಗಳು, ವಿದ್ಯುತ್ ಮೂಲಗಳು (ಜಲ, ಸೌರ, ಪರಮಾಣು ಮತ್ತು ಗಾಳಿ) ಭಾರಿ, ಮಧ್ಯಮ ಮತ್ತು ಸಣ್ಣ ಪ್ರಮಾಣದ ಕೈಗಾರಿಕೆಗಳು, ಆಗ್ರೋ ಆಧಾರಿತ ಕೈಗಾರಿಕೆಗಳು, ಕರ್ನಾಟಕದ ಸಾರಿಗೆ ಮತ್ತು ಸಂಪರ್ಕ ವ್ಯವಸ್ಥೆಗಳು, ಭೌಗೋಳಿಕ ಮಾಹಿತಿ ವ್ಯವಸ್ಥೆ.

6. **ನಗರ ಭೂಬಳಕೆ ನೀತಿ ಮತ್ತು ನಗರೀಕರಣ:** ಜನಸಂಖ್ಯಾ ವೈಶಿಷ್ಟ್ಯಗಳು, ಸಾಕ್ಷರತೆ ಮತ್ತು ನಗರೀಕರಣ. ಜನಸಂಖ್ಯಾ ಸಮಸ್ಯೆಗಳು ಮತ್ತು ನೀತಿಗಳು, ಸಾಕ್ಷರತೆ, ನಗರ ವರ್ಗೀಕರಣ ಮತ್ತು ನಗರ ಕ್ಷೇತ್ರಗಳ ಪ್ರಭಾವ, ಗ್ರಾಮೀಣ ನಗರ ಅಂಚಿನಲ್ಲಿರುವ ನಗರ ಬೆಳವಣಿಗೆಯ ಸಮಸ್ಯೆಗಳು, ಭೂಬಳಕೆ, ನಗರ ಯೋಜನೆ, ಕೊಳಚೆ ಮತ್ತು ನಗರ ವಸತಿ, ಆಂತರಿಕ ಮತ್ತು ಪ್ರಾದೇಶಿಕ ವ್ಯಾಪಾರ ಮತ್ತು ಗ್ರಾಮೀಣ ಮಾರುಕಟ್ಟೆಗಳ ಕೇಂದ್ರಗಳ ಪಾತ್ರ.

**ವಿಭಾಗ–II ಭಾರತದ ಸಂವಿಧಾನ ಅವಲೋಕನ ( 7 ಘಟಕಗಳು)**

1. **ಸಂವಿಧಾನದ ಸ್ವರೂಪ**: ಸಾಂವಿಧಾನಿಕ ಬೆಳವಣಿಗೆಗಳು, ಸಂವಿಧಾನದ ಪ್ರಮುಖ ಲಕ್ಷಣಗಳು: ಪೀಠಿಕೆ, ರಾಜ್ಯ ನೀತಿಯ ನಿರ್ದೇಶಕ ತತ್ವಗಳು, ಭಾರತೀಯ ಒಕ್ಕೂಟ, ಇತ್ಯಾದಿ,
2. **ಮೂಲಭೂತ ಹಕ್ಕುಗಳು**: ಸಮಾನೆಯ ಹಕ್ಕು, ಸ್ವಾತಂತ್ರ್ಯದ ಹಕ್ಕು, ಶೋಷಣೆ ವಿರುದ್ಧದ ಹಕ್ಕು, ಧಾರ್ಮಿಕ ಸ್ವಾತಂತ್ರ್ಯದ ಹಕ್ಕು, ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಹಕ್ಕು, ಸಂವಿಧಾನಾತ್ಮಕ ಪರಿಹಾರದ ಹಕ್ಕು,ಸೂಕ್ತ ನಿರ್ಬಂಧಗಳು – ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಗಳಿಗೆ ಮತ್ತು ಅಲ್ಪಸಂಖ್ಯಾತರಿಗೆ ಅವಕಾಶಗಳು, ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಹಿಂದುಳಿದ ವರ್ಗಗಳಿಗೆ ಮೀಸಲಾತಿಗಳು, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ದೌರ್ಜನ್ಯಗಳ ನಿಷೇಧ ಅಧಿನಿಯಮ, ರಾಷ್ಟ್ರೀಯ ಮತ್ತು ರಾಜ್ಯ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಆಯೋಗ.
3. **ಕಾನೂನಾತ್ಮಕ ಅಧಿಕಾರಗಳ ಹಂಚಿಕೆ:**– ಕೇಂದ್ರ ಮತ್ತು ರಾಜ್ಯ ನಡುವೆ, ಕೇಂದ್ರ ಮತ್ತು ರಾಜ್ಯಗಳ ನಡುವೆ ಆಡಳಿತಾತ್ಮಕ ಮತ್ತು ಆರ್ಥಿಕ ಸಂಬಂಧಗಳು, ಸಂವಿಧಾನಿಕ ಸಂಸ್ಥೆಗಳ ಅಧಿಕಾರಗಳು ಮತ್ತು ಪ್ರಕಾರ್ಯಗಳು. ರಾಜ್ಯಪಾಲರ ಅಧಿಕಾರಗಳು ಮತ್ತು ಪ್ರಕಾರ್ಯಗಳು – ಮಂತ್ರಿ ಪರಷತ್ತು ಮತ್ತು ಸಚಿವ ಸಂಪುಟ, ನ್ಯಾಯಿಕ ಪರಿಹಾರೋಪಾಯಗಳು.
4. **ಏಕಸದನ ಮತ್ತು ದ್ವಿಸದನ:**– ವಿಧಾನ ಮಂಡಲ ಪ್ರಕಾರ್ಯಗಳು ಮತ್ತು ಹೊಣೆಗಾರಿಕೆಯ ಬಿಕ್ಕಟ್ಟು, ಪ್ರತ್ಯಾಯೋಜಿತ ಶಾಸನ, ಕಾನೂನಾತ್ಮಕ ಕಾರ್ಯವಿಧಾನ ಮತ್ತು ವಿಧಾನ ಮಂಡಲದ ಸಮಿತಿಗಳು, ಪ್ರತ್ಯಾಯೋಜಿತ ಶಾಸನದ ಮೇಲೆ ಕಾನೂನಾತ್ಮಕ ಮತ್ತು ನ್ಯಾಯಾಂಗದ ನಿಯಂತ್ರಣ, ಆಡಳಿತಾತ್ಮಕ ಕ್ರಮದ ನ್ಯಾಯಿಕ ವಿಮರ್ಶೆ, ಭಾರತದ ಕಂಟ್ರೋಲರ್ ಮತ್ತು ಆಡಿಟರ್ ಜನರಲ್ (Comptroller and Auditor General of India), ಭಾರತದ ಅಟ್ಟಾರ್ನಿ ಜನರಲ್.
5. **ಸಂವಿಧಾನದ ಪ್ರಮುಖ ತಿದ್ದುಪಡಿಗಳು**: ಮೂಲ ರಚನೆಯ ಸಿದ್ಧಾಂತ, ತುರ್ತು ಪರಿಸ್ಥಿತಿಯ ಅವಕಾಶಗಳು ಮತ್ತು ವಿಕೇಂದ್ರಿಕರಣ, ಪಂಚಾಯತ್ ರಾಜ್, ಎಪ್ಪತ್ತಮೂರನೇ ಮತ್ತು ಎಪ್ಪತ್ತನಾಲ್ಕನೇ ತಿದ್ದುಪಡಿಗಳು ಇತ್ಯಾದಿ.,
6. **ಭಾರತದಲ್ಲಿ ಕಲ್ಯಾಣ ಪರಿಕಲ್ಪನೆ ವ್ಯವಸ್ಥೆ**: ರಾಜ್ಯ ನೀತಿಯ ನಿರ್ದೇಶಕ ತತ್ವಗಳು ಮತ್ತು ಅವುಗಳ ಸಂಬಂಧಗಳು, ಆಸ್ತಿ ಹಕ್ಕು, ಚುನಾವಣಾ ಆಯೋಗ, ಲೋಕಾ ಸೇವಾ ಆಯೋಗಗಳು, ಮಹಿಳಾ ಆಯೋಗ, ರಾಷ್ಟ್ರೀಯ ಮತ್ತು ರಾಜ್ಯ ಅಲ್ಪಸಂಖ್ಯಾತರ ಆಯೋಗ, ಹಿಂದುಳಿದ ವರ್ಗಗಳ ಆಯೋಗ, ಮಾನವ ಹಕ್ಕುಗಳ ಆಯೋಗ, ಹಣಕಾಸು ಆಯೋಗ, ಯೋಜನಾ ಆಯೋಗ, ರಾಷ್ಟ್ರೀಯ ಅಭಿವೃದ್ಧಿ ಮಂಡಳಿ.
7. **ಕೇಂದ್ರ ರಾಜ್ಯದಡಿಯಲ್ಲಿನ ಸೇವೆಗಳು**: ಸರ್ಕಾರ ಮತ್ತು ಸರ್ಕಾರಿ ನೌಕರರಿಗೆ ಸಂಬಂಧಿಸಿದಂತೆ ಸಂವಿಧಾನಾತ್ಮಕ ಅವಕಾಶಗಳು.

**ವಿಭಾಗ–III ಸಾರ್ವಜನಿಕ ಆಡಳಿತ ಮತ್ತು ನಿರ್ವಹಣೆ – ಅಂತರಾಷ್ಟ್ರೀಯ ಸಂಬಂಧಗಳು (7 ಘಟಕಗಳು)**

1. **ಖಾಸಗಿ ಮತ್ತು ಸಾರ್ವಜನಿಕ ಆಡಳಿತ**: ಸಮಾಜದಲ್ಲಿ ಅದರ ಪಾತ್ರ, ಕಲೆ ಮತ್ತು ವಿಜ್ಞಾನದಲ್ಲಿ ಸಾರ್ವಜನಿಕ ಆಡಳಿತ, ಹೊಸ ಸಾರ್ವಜನಿಕ ಆಡಳಿತ ಮತ್ತು ಹೊಸ ಸಾರ್ವಜನಿಕ ನಿರ್ವಹಣೆ. ಪ್ರತಿಕ್ರಿಯಾಶೀಲ ಆಡಳಿತ. ಆಡಳಿತ ಮತ್ತು ನಿರ್ವಹಣೆ ನಡುವಿನ ವ್ಯತ್ಯಾಸ, ಸಾರ್ವಜನಿಕ ಮತ್ತು ಖಾಸಗಿ ಆಡಳಿತದ ನಡುವಿನ ವ್ಯತ್ಯಾಸ.
2. **ಸಂಘಟನೆ ರಚನೆ**: ಸಿಬ್ಬಂದಿ, ಹಣಕಾಸು, ಆಡಳಿತಾತ್ಮಕ ಕಾನೂನು, ಕಾನೂನು ಮತ್ತು ಸುವ್ಯವಸ್ಥೆ ನಿರ್ವಹಣೆ, ಜನಕಲ್ಯಾಣ ಆಡಳಿತ. ಭಾರತೀಯ ಆಡಳಿತದಲ್ಲಿ ಪ್ರದೇಶಗಳ ವಿವಾದಗಳು, ಅಭಿವೃದ್ಧಿ ಆಡಳಿತ.
3. **ಸಾಂಸ್ಥಿತಿಕ ವರ್ತನೆ ಮತ್ತು ನಿರ್ವಹಣೆ ಪರಿಕಲ್ಪನೆಗಳು**: ಸಾಂಸ್ಥಿಕ ರಚನೆ, ವ್ಯವಸ್ಥೆಗಳು, ಪ್ರಕ್ರಿಯೆಗಳು, ತಂತ್ರ ಕುಶಲತೆ, ಕಾರ್ಯನೀತಿಗಳು ಮತ್ತು ಉದ್ದೇಶಗಳು, ನಿರ್ಧಾರ ತೆಗೆದುಕೊಳ್ಳುವುದು, ಸಂವಹನ, ಕೇಂದ್ರೀಕರಣ, ವಿಕೇಂದ್ರೀಕರಣ, ಅಧಿಕಾರದ ಪ್ರತ್ಯಾಯೋಜನೆ, ಹೊಣೆಗಾರಿಕೆ, ನಿಯಂತ್ರಣ.
4. **ಔಪಚಾರಿಕ ಮತ್ತು ಅನೌಪಚಾರಿಕ ಸಂಘಟನೆ**: ಪ್ರಕಾರ್ಯಗಳ ನಿರ್ವಹಣೆ, ಹಣಕಾಸು, ಎಚ್ಆರ್ ವ್ಯಾಪಾರೋದ್ಯಮ, ಉತ್ಪಾದನೆ, ನಾಯಕತ್ವ ಮತ್ತು ಪ್ರೇರಣೆ.
5. **ನಿರ್ವಹಣೆ ಸಾಧನಗಳು ಮತ್ತು ತಂತ್ರಗಳು:**– ಅನಿಶ್ಚಿತತೆ ಉಂಟಾದಲ್ಲಿ ತೀರ್ಮಾನ ತೆಗೆದುಕೊಳ್ಳುವುದು ಪಿಇಆರ್‌ಟಿ ಮತ್ತು ಸಿಪಿಎಂ, ಪಿಐಎಂಇ, ಪಿಓಎಸ್‌ಡಿ – ಸಿಓಆರ್‌ಬಿ, ಎಸ್‌ಡಬ್ಲ್ಯೂಓಟಿ ವಿಶ್ಲೇಷಣೆಗಳು, ಗುಣಮಟ್ಟ ಮತ್ತು ಮೌಲ್ಯನಿರ್ಣಯ ಕಾರ್ಯನಿರ್ವಹಣೆ, ಪಿಡಿಸಿಎ ಆವರ್ತ, ಸಿಬ್ಬಂದಿ ಕಾರ್ಯ ನೀತಿಗಳು, ಮಾನವ ಶಕ್ತಿ –ಕಾರ್ಯನೀತಿ ಮತ್ತು ಯೋಜನೆ, ತರಬೇತಿ ಮತ್ತು ಅಭಿವೃದ್ಧಿ, ಸಂಘರ್ಷ ನಿರ್ವಹಣೆ, ಬದಲಾವಣೆ ಮತ್ತು ಅಭಿವೃದ್ಧಿಯ ನಿರ್ವಹಣೆ, ತಂಡ ರಚನೆ ಗುಣಮಟ್ಟದ ಉಪಕರಣಗಳು, (ಹೊಸ ಕಲ್ಪನೆಗಳನ್ನು ಚರ್ಚಿಸುವ ವಿಧಾನ, ನಾಮಿನಲ್ ಗ್ರೂಪ್ ಟೆಕನಿಕ್ (Nominal Group Technique), ಪೆರೆಟೋ ಚಾರ್ಟ್, ಫಿಷಬೋನ್ ಚಿತ್ರ (Fishbone Diagram) ಮತ್ತು ಪ್ರೊಸಸ್ ಚಾರ್ಟ್.
6. **ಆಡಳಿತಾತ್ಮಕ ಸುಧಾರಣೆಗಳು**: ಸಾರ್ವಜನಿಕ ಸೇವೆಯಲ್ಲಿ ನೀತಿ ಮತ್ತು ಮೌಲ್ಯಗಳು, ಸಾರ್ವಜನಿಕ ಸಂಬಂಧಗಳು, ಉತ್ತಮ ಆಡಳಿತ, ಹೊಣೆಗಾರಿಕೆ ಮತ್ತು ನಿಯಂತ್ರಣ, ಕಾರ್ಯಕ್ರಮದ ಮೇಲ್ವಿಚಾರಣೆ ಮತ್ತು ಮೌಲ್ಯಮಾಪನ, ಲೋಕಪಾಲ ಮತ್ತು ಲೋಕಾಯುಕ್ತ, ನಾಗರಿಕ ಕುಂದು ಕೊರತೆಗಳ ನಿವಾರಣೆಗಳು, ಜಿಲ್ಲಾಡಳಿತ ಮತ್ತು ಪಂಚಾಯತ್ ರಾಜ್ ವ್ಯವಸ್ಥೆ, ಕಾನೂನು ಮತ್ತು ಸುವ್ಯವಸ್ಥೆ ಮತ್ತು ಅಭಿವೃದ್ಧಿ ಕಾರ್ಯಗಳು, ಅಭಿವೃದ್ಧಿ ಕಾರ್ಯಕ್ರಮಗಳು, ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಟ ಪಂಗಡಗಳು ಹಾಗೂ ಮಹಿಳೆಯ ಕಲ್ಯಾಣ ಕಾರ್ಯಕ್ರಮಗಳು, ಜನರ ಪಾಲ್ಗೋಳ್ಳುವಿಕೆ, ಆಡಳಿತಾತ್ಮಕ ಸುಧಾರಣೆಗಳ ಆಯೋಗಗಳು–ಕೇಂದ್ರ ಮತ್ತು ರಾಜ್ಯ.
7. **ವಿಶ್ವಸಂಸ್ಥೆ ರಾಷ್ಟ್ರಗಳು ಮತು ವಿಶಿಷ್ಟ ಏಜೆನ್ಸಿಗಳು:**– ಇತರ ಅಂತರಾಷ್ಟ್ರೀಯ ಸಂಘಟನೆಗಳು ಮತ್ತು ಏಜೆನ್ಸಿಗಳು, ಯುಎನ್‌ಓ. ದ ಮೂಲ ಮತ್ತು ಅಭಿವೃದ್ಧಿ–ಅಂತಾರಾಷ್ಟ್ರೀಯ ಸಂಬಂಧಗಳಲ್ಲಿ ಪಾತ್ರ, ಸಾಮಾನ್ಯ ಸಭೆ, ಭದ್ರತಾ ಮಂಡಳಿ, ಆರ್ಥಿಕ ಮತ್ತು ಸಾಮಾಜಿಕ ಮಂಡಳಿ, ಟ್ರಸ್ಟಿಶಿಫ್ ಕೌನ್ಸಿಲ್ (Trusteeship Council), ಅಂತಾರಾಷ್ಟ್ರೀಯ ನ್ಯಾಯಾಲಯ,

ಯುಎನ್ ಮತ್ತು ಶಾಂತಿ ಪಾಲನಾ ನಿರ್ವಹಣೆಗಳು, ಯುಎನ್ ಮತ್ತು ನಿಶ್ಶಸ್ತ್ರೀಕರಣ, ಯುಎನ್ ಲಕ್ಷಣಗಳು, ಡಬ್ಲ್ಯೂಎಚ್‌ಓ, ಐಎಲ್‌ಓ, ಎಫ್‌ಎಒ ಇತ್ಯಾದಿಗಳಂಥ ವಿಶೇಷ ಏಜೆನ್ಸಿಗಳು, ಐಎಮ್‌ಎಫ್, ನಂತ ಅಂತರರಾಷ್ಟ್ರೀಯ ಸಂಸ್ಥೆಗಳು, ವಿಶ್ವಬ್ಯಾಂಕ್, ಎಡಿಬಿ, ಡಬ್ಲ್ಯೂಟಿಒ, ಇಯು, ಎಎಸ್‌ಇಎಎನ್, ಸಾರ್ಕ್, ಎಯು, ಎನ್‌ಎಟಿಒ, ಎನ್‌ಎಎಮ್, ಓಪಿಇಸಿ, ಜಿ–8, ಐಎಇಎ ಇತ್ಯಾದಿಗಳು, ಅಂತಾರಾಷ್ಟ್ರೀಯ ಸಂಬಂಧಗಳಲ್ಲಿ ಅಭಿವೃದ್ಧಿ ರಾಷ್ಟ್ರಗಳ ಪಾತ್ರ, ಭಾರತ ಮತ್ತು ಅದರ ನೆರೆಹೊರೆ ರಾಷ್ಟ್ರಗಳು ಇತ್ಯಾದಿ.

**ಪತ್ರಿಕೆ –4: ಸಾಮಾನ್ಯ ಅಧ್ಯಯನ – 3**

**ವಿಭಾಗ –1: ಭಾರತದ ಅಭಿವೃದಿಯಲ್ಲಿ ಸಾರ್ವಜನಿಕ ಕ್ಷೇತ್ರದ ವಿಜ್ಞಾನ ಮತ್ತು ತಂತ್ರಜ್ಞಾನ, ಮಾಹಿತಿ ತಂತ್ರಜ್ಞಾನದ ಪಾತ್ರ ಮತ್ತು ಪ್ರಭಾವ.**

1. **ವಿಜ್ಞಾನ ಮತ್ತು ತಂತ್ರಜ್ಞಾನದ ಮೂಲಗಳು**

ವಿಜ್ಞಾನ ಮತ್ತು ತಂತ್ರಜ್ಞಾನದ (ಎಸ್&ಟಿ) ದ ಉತ್ಕೃಷ್ಟ ಮತ್ತು ಹೊರಹೊಮ್ಮುತ್ತಿರುವ ಕ್ಷೇತ್ರಗಳು, ವಿಜ್ಞಾನ ಮತ್ತು ತಂತ್ರಜ್ಞಾನದ ಹೆಚ್ಚುವರಿ ಮೌಲ್ಯ, ಭಾರತದಲ್ಲಿ ಪ್ರಸಕ್ತ ವಿಜ್ಞಾನ ಮತ್ತು ತಂತ್ರಜ್ಞಾನದ ಅಭಿವೃದ್ಧಿಗಳು ಮತ್ತು ರಾಷ್ಟ್ರೀಯ ಅಭಿವೃದ್ಧಿಗೆ ಯಂತ್ರವಾಗಿ ವಿಜ್ಞಾನ ಮತ್ತು ತಂತ್ರಜ್ಞಾನದ ಮಹತ್ವ – ಕೈಗಾರಿಕಾ ಅಭಿವೃದ್ಧಿ ಮತ್ತು ನಗರೀಕರಣ– ವಿಜ್ಞಾನ ಮತ್ತು ತಂತ್ರಜ್ಞಾನದ ರಾಷ್ಟ್ರೀಯನೀತಿ; ಕಾಲಕಾಲಕ್ಕೆ ನೀತಿಯಲ್ಲಿ ಬದಲಾವಣೆ; ತಂತ್ರಜ್ಞಾನದ ಮಂಡಳಿ–ಐಸಿಟಿ: ಮೂಲ ಕಂಪ್ಯೂಟರ್‌ಗಳು, ಸಂವಹನ, ದೂರವಾಣಿ ಮತ್ತು ದೂರದರ್ಶನ – ಬ್ರಾಡ್‌ಬ್ಯಾಂಡ್, ಅಂತರ್ಜಾಲ ಮತ್ತು ವೆಬ್–ಮಾಹಿತಿ ತಂತ್ರಜ್ಞಾನ ಕೈಗಾರಿಕೆಗಳು, ವ್ಯಾಪಾರ ಹೊರಗುತ್ತಿಗೆ ಪ್ರಕ್ರಿಯೆ (ಬಿಪಿಒ), ಆರ್ಥಿಕ ಮತ್ತು ಉದ್ಯೋಗದ ಬೆಳವಣಿಗೆ ಇ–ಆಡಳಿತ, ಇ–ವಾಣಿಜ್ಯ ಮತ್ತು ಇ–ಕಲಿಕೆ, ಮಾಹಿತಿ ತಂತ್ರಜ್ಞಾನ ಮತ್ತು ಗ್ರಾಮೀಣ ಅನ್ವಯಗಳು, ಅಂಕೀಯ ಬಿರುಕಿನ ಅಂತರ (ಡಿಜಿಟಲ್ ಡಿವೈಡ್) ಮತ್ತು ಅದರ ತಡೆಗಟ್ಟುವಿಕೆ–ಸಮೂಹ ಮಾಧ್ಯಮಗಳಲ್ಲಿ ಗಣಕಯಂತ್ರಗಳು.

2. **ಬಾಹ್ಯಾಕಾಶ ವಿಜ್ಞಾನ ಮತ್ತು ತಂತ್ರಜ್ಞಾನ:**
   - ಜಾಗತಿಕ ಬ್ಯಾಹ್ಯಾಕಾಶದ ಕಾರ್ಯಕ್ರಮಗಳ ಸಂಕ್ಷಿಪ್ತ ಇತಿಹಾಸ, ಮತ್ತು ಪ್ರಸಕ್ತ ಬಾಹ್ಯಾಕಾಶ ಕಾರ್ಯಕ್ರಮಗಳು.
   - ಭಾರತದಲ್ಲಿ ಬಾಹ್ಯಾಕಾಶದ ಕಾರ್ಯಕ್ರಮಗಳು–ಐಎನ್‌ಎಸ್‌ಎಟಿ,(ಇನ್‌ಸ್ಯಾಟ್) ಐಆರ್‌ಎಸ್ ವ್ಯವಸ್ಥೆಗಳು, ಇಡಿಯುಎಸ್‌ಎಟಿ, (ಎಜುಸ್ಯಾಟ್) ಮತ್ತು ಚಂದ್ರಯಾನ–1 ಇತ್ಯಾದಿ ಮತ್ತು ಭವಿಷ್ಯದ ಕಾರ್ಯಕ್ರಮ.
   - ಶಿಕ್ಷಣ, ಕೃಷಿ ಮತ್ತು ಇತರ ಗ್ರಾಮೀಣಾಭಿವೃದ್ಧಿ ಚಟುವಟಿಕೆಗಳ ವಿಶೇಷ ಉಲ್ಲೇಖಗಳೊಂದಿಗೆ ಅನ್ವಯಿಸಿ ಭಾರತದಲ್ಲಿ ಬಾಹ್ಯಾಕಾಶ ತಂತ್ರಜ್ಞಾನ.

3. **ಇಂಧನ ಸಂಪನ್ಮೂಲಗಳು:**
   - ಭಾರತೀಯ ಇಂಧನ ಸನ್ನಿವೇಶಗಳು–ಜಲವಿದ್ಯುತ್, ಉಷ್ಣ, ಅಣು ಮತ್ತು ನವೀಕರಿಸಬಹುದಾದ; ಅದರ ಸಾಮರ್ಥ್ಯದ ರಕ್ಷಾಕವಚ ಮತ್ತು ಆಯ್ಕೆಗಳು.
   - ನವೀಕರಿಸಬಹುದಾದ ಮುಖ್ಯವಾದ ಇಂಧನ ಸಂಪನ್ಮೂಲಗಳ –ಸೌರ, ಗಾಳಿ, ಸಣ್ಣ/ಅತಿಸಣ್ಣ/ಸೂಕ್ಷ್ಮ ಜಲವಿದ್ಯುತ್, ಜೀವರಾಶಿ (Biomass), ತ್ಯಾಜ್ಯ ಆಧಾರಿತ, ಭೂಶಾಖ (Geothermal), ಉಬ್ಬರದ (tidal), ಹೈಡ್ರೋಜನ್ ಮತ್ತು ಇಂಧನ ಕೋಶಗಳು.
   - ಶಾಸನಗಳನ್ನು ಸಮರ್ಥಗೊಳಿಸುವುದು; ಆರ್ಥಿಕ ಮತ್ತು ಪ್ರಕ್ರಿಯಾ ಪ್ರೋತ್ಸಾಹ ಧನಗಳು ಮತ್ತು ಹೂಡಿಕೆದಾರರಿಗೆ ವ್ಯಾಪಾರ ಅವಕಾಶಗಳು.

4. **ವಿಕೋಪಗಳು, ಉಪದ್ರವಕಾರಿಗಳು ಮತ್ತು ಮಾಲಿನ್ಯ:**
   - ಹವಾಮಾನ ಬದಲಾವಣೆ – ಪ್ರವಾಹ, ಚಂಡಮಾರುತ, ಸುನಾಮಿ, ನೈಸರ್ಗಿಕ ಹಾಗೂ ಮಾನವನಿಂದಾಗುವ ವಿಕೋಪಗಳು ಮತ್ತು ವಿಪತ್ತು ನಿರ್ವಹಣೆ.
   - ಭಾರತದಲ್ಲಿ ಬೆಳೆ ವಿಜ್ಞಾನ, ಗೊಬ್ಬರಗಳು, ಉಪದ್ರವಕಾರಿಗಳು ಮತ್ತು ಬೆಳೆರೋಗಗಳ ನಿಯಂತ್ರಣ
     ಶುದ್ಧ ಕುಡಿಯುವ ನೀರು ಮತ್ತು ಸರಬರಾಜು
     ನೈರ್ಮಲ್ಯ ಮತ್ತು ತ್ಯಾಜ್ಯ ವಿಲೇವಾರಿ
     ನಗರೀಕರಣ, ಕೈಗಾರಿಕೀಕರಣ ಮತ್ತು ಮಾಲಿನ್ಯ ನಿಯಂತ್ರಣ

5. **ಸಂಬಂಧಿಸಿದ ಸಂವೇದನೆಗಳು:**
   – ಸರ್ವವ್ಯಾಪ್ತಿ ವಿಜ್ಞಾನ ಮತ್ತು ತಂತ್ರಜ್ಞಾನ ಸಾಕ್ಷರತೆ;
   – ಮಾನವೀಯ ಮೌಲ್ಯದೊಂದಿಗೆ ತಂತ್ರಜ್ಞಾನ
   – ಮಾನವ ಅಭಿವೃದ್ಧಿ ಸೂಚ್ಯಂಕ (ಎಚ್‌ಡಿಐ)
   – ಜಿಡಿಪಿ ಯ ಬೆಳವಣಿಗೆ ಮತ್ತು ಕೊಡುಗೆ
   – ಜಾಗತಿಕ ಸ್ಪರ್ಧೆಯನ್ನು ಎದಿರಿಸುವುದು.
   – ಸಂಸ್ಕೃತಿ ಮತ್ತು ದೇಶಿಯ ಜ್ಞಾನವನ್ನು ಸಂರಕ್ಷಣೆ ಮತ್ತು ಉನ್ನತಿಕರಿಸುವ ಸಂಬಂಧ.

6. **ಜ್ಞಾನ ಸಮಾಜದ**

- ಮಾನವ ಬಂಡವಾಳ, ಅದರ ಶಕ್ತಿ, ಶಿಕ್ಷಣ ನೀಡುವುದು, ಕೌಶಲ್ಯ ಮತ್ತು ಮೌಲ್ಯಗಳು.
- ಆರ್ಥಿಕ ಬೆಳವಣಿಗೆ, ಸಾಮಾಜಿಕ ಅಭಿವೃದ್ಧಿ, ಸಾಂಸ್ಕೃತಿಕ ಏಳಿಗೆ ಮತ್ತು ರಾಜಕೀಯ ಸಬಲೀಕರಣದಲ್ಲಿ ಜ್ಞಾನದ ಪಾತ್ರ,
- ಜ್ಞಾನದ ಮೂಲಕ ಗುರಿಗಳ ಸಾಧನೆ; ಬಡತನದ ನಿರ್ಮೂಲನೆ; ಸಾರ್ವತ್ರಿಕ ಪ್ರಾಥಮಿಕ ಶಿಕ್ಷಣ; ಲಿಂಗ ಸಮಾನತೆ.

7. **ಗ್ರಾಮೀಣ ಉನ್ನತೀಕರಣ ಮತ್ತು ವಿಜ್ಞಾನ ಮತ್ತು ತಂತ್ರಜ್ಞಾನ**

- ಗ್ರಾಮೀಣ ಪ್ರದೇಶಗಳಲ್ಲಿ ಆಧುನಿಕ ಮೂಲಸೌಕರ್ಯಗಳು, ಭೌತಿಕ ವಿಭಾಗ, ವಿದ್ಯುನ್ಮಾನ, ಜ್ಞಾನ ಮತ್ತು ಆರ್ಥಿಕ ಸಂಪರ್ಕವನ್ನು ಸ್ಥಾಪಿಸುವುದು.
- ಪ್ರಾದೇಶಿಕ ಭಾಷೆ: ಐಸಿಟಿ.ಯಲ್ಲಿ ಬಳಕೆ.
- ತೋಟಗಾರಿಕೆ: ಸಂಶೋಧನೆ ಮತ್ತು ಅಭಿವೃದ್ಧಿಯೊಂದಿಗೆ ಹೈಬ್ರೀಡ್ ಬೀಜ ಉತ್ಪಾದನೆ; ಹಣ್ಣು ಮತ್ತು ತರಕಾರಿ ಸಂಸ್ಕರಣೆ ಘಟಕಗಳನ್ನು ಸ್ಥಾಪಿಸುವುದು, ಪ್ಯಾಕೇಜಿಂಗ ಮತ್ತು ಮಾರಾಟ ಮಾಡುವಿಕೆ.
- ಕೃಷಿ ಆಹಾರ ಸಂಸ್ಕರಣೆ: ಗ್ರಾಮದ ಸಮೂಹಗಳನ್ನು ರೂಪಿಸುವಿಕೆ ಮತ್ತು ಆಹಾರ ಸಂಗ್ರಹ ಸ್ಥಾಪಿಸುವುದು; ಮತ್ತು ಆಹಾರ ಪ್ಯಾಕ್ ಮಾಡುವುದು ಮತ್ತು ಮಾರಾಟ.
- ಜೈವಿಕ ಇಂಧನ ಸಾಗುವಳಿ ಮತ್ತು ತೆಗೆಯುವಿಕೆ.
- ವೈಜ್ಞಾನಿಕ ನೀರು ಸಂಗ್ರಹಣೆ

**ವಿಭಾಗ– : II ಸ್ವಾಭಾವಿಕ ವಿಜ್ಞಾನ, ಜೀವ ವಿಜ್ಞಾನ, ಕೃಷಿ ವಿಜ್ಞಾನದ ಆರೋಗ್ಯ ಮತ್ತು ಶುಚಿತ್ವದಲ್ಲಿ ಮುಂದುವರೆದ ಮತ್ತು ಆಧುನಿಕ ದೋರಣೆಗಳು – (ಏಳು ಘಟಕಗಳು)**

1. **ಸ್ವಾಭಾವಿಕ ವಿಜ್ಞಾನ:**

ಸಸ್ಯಗಳು – ಬೆಳೆಗಳ ಸಸ್ಯಗಳು, ಅರಣ್ಯ ರೂಪಗಳು, ವೈದ್ಯಕೀಯ ಮತ್ತು ಸುಗಂಧದ ಸಸ್ಯಗಳು, ಸಸ್ಯಗಳ ಉಪಯುಕ್ತತೆ ಮತ್ತು ಮಾನವ ವ್ಯವಹಾರಗಳು (ಉಪಯುಕ್ತತೆ), ದ್ಯುತಿ ಸಂಶ್ಲೇಷಣೆ, ಉತ್ಸರ್ಜನ (Transpiration), ಹಾನಿಕಾರಕ ಸಸ್ಯಗಳು.

- ಪ್ರಾಣಿಗಳ ಸಾಮಾನ್ಯ ವರ್ಗೀಕರಣ – ಸಾಕು ಪ್ರಾಣಿಗಳು ಮತ್ತು ವನ್ಯ ಮೃಗಗಳು. ಪ್ರಾಣಿಗಳು ಮತ್ತು ಮಾನವ ವ್ಯವಹಾರಗಳ ಉಪಯುಕ್ತತೆಗಳು (ಉಪಯುಕ್ತತೆ).
- ಸೂಕ್ಷ್ಮ ಜೀವಿಗಳು: ಸಾಮಾನ್ಯ ಬ್ಯಾಕ್ಟೀರಿಯಾ, ವೈರಸ್, ಶೀಲೀಂಧ್ರಗಳು (Fungi), ಮನುಷ್ಯವರ್ಗದ ಮೇಲೆ ಅದರ ಪ್ರಯೋಜನಕಾರಿ ಮತ್ತು ಹಾನಿಕಾರಕ ಪರಿಣಾಮ.

2. **ಕೃಷಿ ವಿಜ್ಞಾನ:**

ರಾಷ್ಟ್ರೀಯ ಮತ್ತು ರಾಜ್ಯದ ಅರ್ಥವ್ಯವಸ್ಥೆಯಲ್ಲಿ ಕೃಷಿ ಸನ್ನಿವೇಶ ಮತ್ತು ಕೃಷಿಯ ಪ್ರಾಮುಖ್ಯತೆ, ಬೆಳೆ ಉತ್ಪಾದನೆ ಮತ್ತು ಸಂರಕ್ಷಣೆ.ರಾಸಾಯನಿಕ ಗೊಬ್ಬರ ಮತ್ತು ಸಾವಯವ ಗೊಬ್ಬರ(ವರ್ಮಿ ಕಾಂಪೋಸ್ಟ್), ಕೃಷಿ ಉದ್ಯಮಗಳ ವೆಚ್ಚ ಲಾಭ ಮತ್ತು ಹೂಡಿಕೆ ವಿಶ್ಲೇಷಣೆ, ಉತ್ಪಾದನೆ ಮತ್ತು ಉತ್ಪಾದಕತೆ ವರ್ಧನೆ ಕಾರ್ಯಕ್ರಮಗಳು – ಹಸಿರು, ಬಿಳಿ, ಹಳದಿ, ನೀಲಿ ಕ್ರಾಂತಿಗಳು, ಸಾವಯುವ ಕೃಷಿ ಮತ್ತು ಕೃಷಿ ಯಂತ್ರಗಳ ಇತ್ತೀಚಿನ ಪ್ರವೃತ್ತಿಗಳು. ಕೃಷಿ ವ್ಯವಸ್ಥೆ ಮತ್ತು ಅದಕ್ಕೆ ಆಧಾರವಾಗಿರುವುದು, ಕೃಷಿ ಸಂಸ್ಕರಣೆ ಮತ್ತು ಕೃಷಿಯಾಧಾರಿತ ಕೈಗಾರಿಕೆಗಳು, ಸುಗ್ಗಿಯ ನಂತರದ ತಂತ್ರಜ್ಞಾನ ಮತ್ತು ಮೌಲ್ಯ ವರ್ಧನೆ, ಭೂಮಿ ಮತ್ತು ಜಲ ಸಂಪನ್ಮೂಲಗಳ ನಿರ್ವಹಣೆ.

3. **ತೋಟಗಾರಿಕೆ ಮತ್ತು ರೇಷ್ಮೆ ಕೃಷಿ:**

**ತೋಟಗಾರಿಕೆ ಪ್ರಾಮುಖ್ಯತೆ** – ತೋಟಗಾರಿಕೆ–ಹೂವಿನ ಕೃಷಿ, ತರಕಾರಿಗಳು, ಹಣ್ಣುಗಳು, ತೋಟದ ಬೆಳೆಗಳು, ಮಸಾಲೆಗಳು, ಸುಗಂಧದ ಮತ್ತು ಔಷಧೀಯ ಸಸ್ಯಗಳ ಪ್ರಾಮುಖ್ಯತೆ. ಹೈಟೆಕ್ ತೋಟಗಾರಿಕೆ (ಹಸಿರು/ಪಾಲಿಮನೆ ಸಾಗುವಳಿ). ಸುಗ್ಗಿಯ ನಂತರ ನಿರ್ವಹಣೆ ಮತ್ತು ಮೌಲ್ಯವರ್ಧನೆ. ತೋಟಗಾರಿಕೆ ಅಭಿವೃದ್ಧಿಗೆ ವಿಶೇಷ ಸಂವರ್ಧನೆ ಕಾರ್ಯಕ್ರಮಗಳು.

**ರೇಷ್ಮೆ ಕೃಷಿ:** ಭಾರತ ಮತ್ತು ಕರ್ನಾಟಕದಲ್ಲಿ ರೇಷ್ಮೆ ಕೃಷಿಯ ಪ್ರಾಮುಖ್ಯತೆ, ಉಪ್ಪು ನೇರಳೆ (ಹಿಪ್ಪು ನೇರಳೆ) ಮತ್ತು ಉಪ್ಪು–ನೇರಳೆಯಲ್ಲದ ರೇಷ್ಮೆ ಕೃಷಿ ಹಂಚಿಕೆ, (ಪ್ರದೇಶ, ಉತ್ಪಾದನೆ ಮತ್ತು ರಾಜ್ಯಾದ್ಯಂತ ಉತ್ಪಾದಕತೆ) ರೇಷ್ಮೆಗೂಡು ಉತ್ಪಾದನೆ.

4. **ಜೈವಿಕ ತಂತ್ರಜ್ಞಾನದಲ್ಲಿ ಪ್ರಾರಂಭಗಳು.–**

ಜೈವಿಕ ತಂತ್ರಜ್ಞಾನದ ಪರಿಕಲ್ಪನೆ, ತಳೀಯ ಎಂಜಿನಿಯರಿಂಗ್ ಮತ್ತು ಕಾಂಡಕೋಶಗಳ ಸಂಶೋಧನ ಪರಿಚಯ ಮತ್ತು ವಿನಿಯೋಗ, ದ್ರವ್ಯ ತಳಿ ಮತ್ತು ಆಯ್ಕೆಗೆ ನೆರವಾದ ಮಾರ್ಕರ್, ಟ್ರಾನ್ಸ್‌ಜಿನಿಕ್ ಸಸ್ಯಗಳು (ಕುಲಾಂತರಿ ತಳಿ) ಮತ್ತು ಅದರ ಪ್ರಯೋಜನ, ಪರಿಸರ ಮತ್ತು ಸಮಾಜದ ಮೇಲೆ ಇದರ ಹನಿಕಾರಕ ಪರಿಣಾಮಗಳು. ಕೃಷಿಯಲ್ಲಿ ಜೈವಿಕ ತಂತ್ರಜ್ಞಾನ (ಜೈವಿಕ– ಗೊಬ್ಬರ, ಜೈವಿಕ–ಕ್ರಿಮಿನಾಶಕಗಳು, ಜೈವಿಕ–ಇಂಧನಗಳು, ಅಂಗಾಂಶ ಕೃಷಿ, ಕ್ಲೋನಿಂಗ್) ಆಹಾರ ಜೈವಿಕ–ತಂತ್ರಜ್ಞಾನ, ಆಹಾರ ಸುರಕ್ಷತೆ ಮತ್ತು ಸೂಕ್ಷ್ಮಜೀವಿಯ ಮಾನದಂಡಗಳು, ಆಹಾರ ಗುಣಮಟ್ಟದ ಮಾನದಂಡಗಳು, ಆಹಾರದ ಬಗ್ಗೆ ಕಾನೂನುಗಳು ಮತ್ತು ನಿಯಂತ್ರಣಗಳು.

